# ಅಚಲ

ತಿಂಗಳ ಪತ್ರಿಕೆ

ಫೆಬ್ರವರಿ - 2003

11

ಒಳಗೇನಿದೆ







ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 18 ಸಂಚಿಕೆ : 2

ಸಂಪಾದಕ ಮಂಡಲಿ

ಎನ್. ಗಾಯತ್ರಿ

ನೇಮಿಚಂದ್ರ, ದೇವಿ,

ಶಾಂತಾನಾಗರಾಜ್

ಹೆಚ್. ಎನ್: ಗೀತಾ

ಹೇಮಲತಾ ಮಹಿಷಿ

ಪ್ರಕಾಶಕರು

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ

ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು.

ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.

ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


Achala - Edited by
Dr. N. Gayathri

Published by
Dr. G. Ramakrishna on behalf of Jagruthi Mahila Adhyayana Kendra

Printed at
Lipi Mudrana
Bangalore - 560 004


ಆತ್ಮೀಯರೆ,

ಅಚಲ ನಿಮ್ಮೆಲ್ಲರ ಪ್ರೀತಿ, ವಿಶ್ವಾಸಗಳನ್ನು ಪಡೆದುಕೊಂಡು ಹದಿನೆಂಟನೆಯ ವರ್ಷಕ್ಕೆ ಕಾಲಿಡುತ್ತಿದೆ. ಈ ಪತ್ರಿಕೆಯು ಇನ್ನೂ ಹೆಚ್ಚು ಅರ್ಥಪೂರ್ಣವಾಗಿ ಪ್ರಕಟವಾಗಬೇಕಾದರೆ ನಿಮ್ಮೆಲ್ಲರ ಸಲಹೆ, ಸಹಕಾರ ಮತ್ತು ಕ್ರಿಯಾತ್ಮಕ ಭಾಗವಹಿಸುವಿಕೆ ಮುಖ್ಯ. ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯಾಗಿ ಮಾಡಿಕೊಂಡು ಅರ್ಥಪೂರ್ಣ ಸಂವಾದಕ್ಕೆ ಮತ್ತು ಚಳುವಳಿಗೆ ನೆರವಾಗಿ.

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

## ಅಚಲದ ಚಂದಾ ವಿವರಗಳು ಹೀಗಿವೆ

ವಾರ್ಷಿಕ ಚಂದಾ - ರೂ. 40/- (ವ್ಯಕ್ತಿಗಳಿಗೆ)

ರೂ. 75/- (ಸಂಸ್ಥೆಗಳಿಗೆ)

ಅಜೀವ ಚಂದಾ - ರೂ. 300/- (ವ್ಯಕ್ತಿಗಳಿಗೆ)

ರೂ. 400/- (ಸಂಸ್ಥೆಗಳಿಗೆ)


**ಅಚಲ ವಿಳಾಸ**

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ
ಬನಶಂಕರಿ 3ನೇ ಹಂತ, ಬೆಂಗಳೂರು - 560 085

# ಸಂಪಾದಕೀಯ

## ಆರದ ಚೇತನ - ಕಲ್ಪನಾ ಚಾವಲಾ



ಸೌಂದರ್ಯ ರಾಣಿಯರು, ರೂಪದರ್ಶಿಯರು ಇಲ್ಲ ಕ್ರಿಕೆಟ್ ನಾಯಕರು ಸಾಮಾನ್ಯರಾಗಿ ನಮ್ಮ ಪತ್ರಿಕೆಗಳ ಮುಖಪುಟದಲ್ಲಿ ರಾರಾಜಿಸುತ್ತಾರೆ. ಜೇನ್ ಗುಡಾಲರಂತಹ ವಿಜ್ಞಾನಿ ಭಾರತಕ್ಕೆ ಬಂದಾಗಲೂ, ಬೆಂಗಳೂರಿಗೆ ಇಳಿದಾಗಲೂ, ಪತ್ರಿಕೆಗಳಿಗೆ ಅದು ಮುಖಪುಟದಲ್ಲಿ ಬರುವಷ್ಟು ದೊಡ್ಡ ಸುದ್ದಿಯಲ್ಲ. ಈ ಹಿನ್ನೆಲೆಯಲ್ಲಿ ಇಂದು ತಟ್ಟನೆ ಪ್ರತಿಯೊಂದು ಪತ್ರಿಕೆಯ ಮುಖಪುಟದಲ್ಲಿ ಕಲ್ಪನಾ ಚಾವಾಲಾ ಅವರನ್ನು ನೋಡಿ ಸಂತಸವಾದರೂ, ಜೊತೆಯಲ್ಲೇ ಅಗಾಧ ನೋವಿನ ಅನುಭವ. ಭಾರತವೆಂದರೆ 'ಗೊಂಡಾರಣ್ಯ, ಅಲ್ಲಿ ಹೆಣ್ಣು ಮಕ್ಕಳನ್ನು ವರದಕ್ಷಿಣೆಗಾಗಿ ಸುಡುತ್ತಾರೆ, ಗಂಡ ಸತ್ತರೆ ಸತಿ ಹೋಗುತ್ತಾರೆ' ಎಂದಷ್ಟೇ ತಿಳಿದ ಅಮೆರಿಕಕ್ಕೆ ಭಾರತದ ಹೆಣ್ಣು ಮಕ್ಕಳ ಶಕ್ತ ಪ್ರತೀಕವಾಗಿ ಕಲ್ಪನಾ ಮೇಲೆದ್ದರು. ದುಃಖದ ವಿಚಾರವೆಂದರೆ, ಕಲ್ಪನಾ ತಮ್ಮ ಸಾವಿನಲ್ಲಿ ಜಗತ್ತಿನೆಲ್ಲರ ಗಮನ ಸೆಳೆದಿದ್ದಾರೆ. ಅವರು ಬದುಕಿದ್ದ ಸಮಯದಲ್ಲಿ ಪ್ರಥಮ ಬಾರಿಗೆ ಅಂತರಿಕ್ಷಕ್ಕೆ ಹಾರಿದ ಸಂಭ್ರಮದ ಕ್ಷಣದಲ್ಲೂ, ಸಾಮಾನ್ಯ ಜನತೆಗೆ ಅವರ ಬಗ್ಗೆ ಇಷ್ಟೊಂದು ಮಾಹಿತಿಗಳು ಸಿಕ್ಕಿರಲಿಲ್ಲ. ಈ ದುರಂತದ ಕಾರಣದಿಂದಲೇ ಸಮೂಹ ಮಾಧ್ಯಮಗಳು ಇಂದು ಕಲ್ಪನಾರ ಕತೆಯನ್ನು ಮನೆ ಮನೆಗೆ, ಹಳ್ಳಿ ಹಳ್ಳಿಗೆ ತಲುಪಿಸುತ್ತಿವೆ.

ಪ್ರತಿಯೊಬ್ಬ ಭಾರತೀಯನ ಎದೆ ಹೆಮ್ಮೆಯಿಂದ ಉಬ್ಬುವಂತೆ ಮಾಡಿದ ಸಾಧನೆ ಕಲ್ಪನಾರವರದು. ಅವರ ಸಾಧನೆ ಮತ್ತಷ್ಟು ಹಿರಿದಾಗುವುದು, ಅವರ ಹಿನ್ನೆಲೆಯಿಂದ. ಭಾರತದ ಬಹಳಷ್ಟು ಹೆಣ್ಣುಮಕ್ಕಳ ಕಾಲುಗಳು, ನೆಲದಲ್ಲಿ ಗಟ್ಟಿಯಾಗಿ ಊರಿ ನಿಲ್ಲಲೂ ಚಡಪಡಿಸುತ್ತಿರುವಾಗ, ಈ ಸಣ್ಣೂರಿನ ಹುಡುಗಿ ನೆಲಬಿಟ್ಟು ಅಂತರಿಕ್ಷಕ್ಕೆ ಹಾರಿದಳು. ನಕ್ಷತ್ರಗಳಿಗೆ ಕೈಚಾಚಿದಳು.

ಡಾಲರ್ ಹಣಕ್ಕಾಗಿ ಅಮೆರಿಕೆಗೆ ಹಾರುವ ಭಾರತೀಯರು ಸಾವಿರ ಸಾವಿರವಿದ್ದಾರೆ. ಹಣವೊಂದೇ ಗುರಿಯಾಗಿ ಪೇರಿಸಿಕೊಂಡವರಿದ್ದಾರೆ. ಸೌಂದರ್ಯ ಇಲ್ಲವೆ ಸಾಫ್ಟ್‌ವೇರ್ ಎರಡೇ 'ಯಶಸ್ಸಿ'ನ ರಂಗಗಳೆಂಬ ಭ್ರಮೆಯಲ್ಲಿರುವ ನಮ್ಮ ಸಮಾಜ ತಟ್ಟನೆ ಎಚ್ಚೆತ್ತು ಕಣ್ಣು ಬಿಡುತ್ತಿದೆ, ಎದುರಿಗೆ ಅನಂತ ಸಾಧ್ಯತೆಗಳ ಬಾಗಿಲು ತೆರೆದಿದೆ.

ಇತ್ತೀಚೆಗೆ ವಿದೇಶದಲ್ಲಿ ನೆಲೆಸಿರುವ ಇಂಜಿನಿಯರ್ ಒಬ್ಬರ ಭೇಟಿಯಾಗಿತ್ತು. ತನ್ನ ಅಪ್ಪಟ ಭಾರತೀಯ ಹೆಸರಿನ ಹಿಂದಕ್ಕೆ 'ಜಾರ್ಜ್' ಅಂಟಿಸಿಕೊಂಡಿದ್ದರು. ಅವರು ಧರ್ಮ ಬದಲಿಸಿರಲಿಲ್ಲ, ಆದರೆ ಬಿಳಿಯರ ದೇಶದಲ್ಲಿ ಅವರಲ್ಲೊಂದಾಗುವ ತವಕದಲ್ಲಿ 'ಜಾರ್ಜ್; ಸೇರಿಸಿಕೊಂಡಿದ್ದರು. ತಮ್ಮ ಹುದ್ದೆಯ ಹಾದಿಯಲ್ಲಿ ತಾನು 'ಭಾರತೀಯ'ನೆಂಬುದನ್ನು ಆದಷ್ಟು ಮುಚ್ಚಿಡಬೇಕೆಂದು ಭಾವಿಸಿದ್ದರು. ಕಲ್ಪನಾ ತನ್ನ ಮೂಲದ ಬಗ್ಗೆ ಎಂದೂ ನಾಚಿದವರಲ್ಲ, ಹಿಂಜರಿದವರಲ್ಲ. ಸದಾ ಅವರು 'ನಾನು ಕಲ್ಪನಾ, ಕರ್ನಾಲಿನವಳು' ಎಂದು ಪರಿಚಯಿಸಿಕೊಳ್ಳುತ್ತಿದ್ದರು. 'ಕರ್ನಲ್' ಎಲ್ಲಿದೆ ಎಂದು ಬಹಳಷ್ಟು ಭಾರತೀಯರಿಗೂ ತಿಳಿದಿರದಾಗ, ಕಲ್ಪನಾ ಕರ್ನಾಲ್ ಅನ್ನು ವಿಶ್ವದ ನಕಾಶೆಯಲ್ಲಿ ಮೂಡಿಸಿದರು. ಅವರ ಹಿರಿತನವಿರುವುದು, ತನ್ನ ಬೇರುಗಳಲ್ಲಿ ಭದ್ರ ಕಾಲೂರಿ, ಮುಗಿಲು ಮುಟ್ಟಿದ ದಿಟ್ಟತನದಲ್ಲಿ. ಕಲ್ಪನಾ ತಮ್ಮ ಕನಸುಗಳ ಬೆನ್ನತ್ತಿ ಅಮೆರಿಕೆಗೆ ಹೋಗಿ, ಅಂತರಿಕ್ಷಕ್ಕೆ ಹಾರಿದ ಮೇಲೂ ತನ್ನ ಹುಟ್ಟೂರಿನ ಆ ಪುಟ್ಟ ಶಾಲೆಯನ್ನು ಮರೆಯಲಿಲ್ಲ. ತನಗೆ

ದೊರೆಯದ ಪ್ರೋತ್ಸಾಹ, ಈ ಶಾಲೆಯ ಹೆಣ್ಣು ಮಕ್ಕಳಿಗೆ ದೊರೆಯಬೇಕೆಂದು ಪ್ರತಿವರ್ಷ ಈ ಶಾಲೆಯಿಂದ ಇಬ್ಬರು ಹುಡುಗಿಯರನ್ನು 'ನಾಸಾ'ಗೆ ಕರೆದೊಯ್ಯುತ್ತಿದ್ದರು. ಅಂತರಿಕ್ಷಕ್ಕೆ ಹಾರಿದರೂ ಕಲ್ಪನಾ ಕೈಗೆಟುಕದ ಮಿನುಗು ತಾರೆಯಾಗಿರಲಿಲ್ಲ, 'ಕಲ್ಪನಾ ಅಕ್ಕ'ನಾಗಿ ಈ ಶಾಲೆಯ ಹುಡುಗಿಯರಿಗೆ ಹತ್ತಿರವಾಗಿದ್ದರು, ಅವರ ಈ ಎಲ್ಲ ಕಾರ್ಯಗಳು ನಮ್ಮವರೆಗೂ ತಲುಪಿದ್ದು, ಅವರ ಸಾವಿನೊಡನೆ. ದೂರದರ್ಶನದಲ್ಲಿ 'ನಾಸಾ'ಗೆ ಹೋದ ಶಾಲೆಯ ಹೆಣ್ಣುಮಕ್ಕಳು ಹೇಳಿದಾಗಲೆ, ಕಲ್ಪನಾ ಅವರಿಗೆ ಎಷ್ಟು ಹತ್ತಿರದವಳಾಗಿದ್ದಳೆಂಬ ಅರಿವು.

ಕಲ್ಪನಾ ಅವರ ಸಾವು ವ್ಯರ್ಥವಾಗಿಲ್ಲ. ನೂರು ಕಲ್ಪನಾರನ್ನು ಈ ನೆಲದಲ್ಲಿ ಪುಟಿಸುವ ತಾಕತ್ತು ಇಂದು ಕಲ್ಪನಾರ ಸ್ಮರಣೆಗಿದೆ. ಭಾರತದ ಮಹಿಳೆಯ ಸಾಮರ್ಥ್ಯವನ್ನು ಮೊದಲು ಭಾರತೀಯರಿಗೇ ಮನದಟ್ಟು ಮಾಡಿಕೊಟ್ಟಿದ್ದಾರೆ ಕಲ್ಪನಾ. 'ಇದು ಹೆಣ್ಣು ಮಕ್ಕಳಿಗೇಕೆ, ಇದು ಹೆಣ್ಣು ಮಕ್ಕಳ ಕೈಯಲ್ಲಿ ಆಗೋಲ್ಲ ಏನು ಓದಿದರೂ ಕಡೆಗೆ ಸೌಟು ತಾನೇ ಹಿಡಿಯುವುದು' ಎನ್ನುವ ಮಂದಿಯೂ ಯೋಚಿಸುವಂತೆ ಮಾಡಿದ್ದಾರೆ.

ಅರ್ಧ ಜನಸಂಖ್ಯೆ ಕೂಡಾ ಅಕ್ಷರಸ್ತರಿಲ್ಲದ, 'ಹೆಣ್ಣುಮಗು ಬೇಡೆಂಬ' ಲಿಂಗತಾರತಮ್ಯದ ಹರಿಯಾಣದಲ್ಲಿ ಹುಟ್ಟಿ ಬೆಳೆದ ಈ ಹುಡುಗಿ ಅಂತರಿಕ್ಷಯಾನಿಯಾಗುವ ಕನಸು ಕಂಡಳು. ಕಲ್ಪನಾ 'ನಮ್ಮ ಕನಸುಗಳಿಗೆ ಸೀಮೆ ಸರಹದ್ದುಗಳಿಲ್ಲ' ಎಂದು ತೋರಿದವರು. ಅಂತರಿಕ್ಷಕ್ಕೆ ಹಾರಿದ ಪ್ರಥಮ ಭಾರತೀಯ ರಾಕೇಶ್ ಶರ್ಮ ಕೂಡಾ, ಚಿಕ್ಕವರಾಗಿದ್ದಾಗ ಅಂತರಿಕ್ಷಕ್ಕೆ ಹಾರುವ ಕನಸು ಕಂಡವರಲ್ಲ, ಅದು ತೀರಾ ವಿಪರೀತವಾಗಿ ಅನಿಸಿತ್ತು. ಆದರೆ ಈ ಸಣ್ಣೂರಿನ ಹೆಣ್ಣುಮಗಳು, ತನ್ನನ್ನು ಬಂಧಿಸಿದ ಸಂಪ್ರದಾಯದ ಕಟ್ಟುಪಾಡಿನ ಪರಿವೆಯಿಲ್ಲದೆ ಅಂತರಿಕ್ಷದ ಕನಸು ಕಂಡಳು. ಅವು ಕೇವಲ ಹಗಲುಗನಸುಗಳಾಗಿರಲಿಲ್ಲ, ಕಲ್ಪನಾ ತಮ್ಮ ಕನಸುಗಳನ್ನು ವಾಸ್ತವವಾಗಿಸುವ ಹಾದಿಯಲ್ಲಿ ಬಿಡದ ಛಲದಲ್ಲಿ ಶ್ರಮಿಸಿ ದುಡಿದರು. ಎದುರಾದ ಅಡೆತಡೆಗಳಿಗೆ ಕುಸಿದವರಲ್ಲ. ಎರಡೂವರೆ ದಶಕಕ್ಕೂ ಹಿಂದೆ ಇಂಜಿನಿಯರಿಂಗ್ ರಂಗವನ್ನು ಹೊಕ್ಕರು, 'ಏರೋನಾಟಿಕಲ್' ವಿಷಯವನ್ನೇ ತಾನು ಓದುವುದೆಂದು ಹಟ ಹಿಡಿದು ಪ್ರವೇಶ ಗಿಟ್ಟಿಸಿದರು, 'ವಿವಾಹವಾಗು' ಎಂದು ಒತ್ತಾಯಿಸಿದ ಕುಟುಂಬವನ್ನು ಒಪ್ಪಿಸಿ ಅವಿವಾಹಿತಳಾಗಿಯೇ ಅಮೆರಿಕೆಗೆ ನಡೆದರು, ಸ್ನಾತಕೋತ್ತರ ಮತ್ತು ಡಾಕ್ಟರೇಟ್ ಪದವಿ ಪಡೆದರು, ಮನೆಯವರನ್ನು ಒಪ್ಪಿಸಿ ತಾನು ಬಯಸಿದ ಹುಡುಗನನ್ನು ವಿವಾಹವಾದರು, ವಿಮಾನ ಚಾಲನೆಯನ್ನು ಕಲಿತರು, ಅಂತರಿಕ್ಷಕ್ಕೆ ಜಿಗಿದರು - ಕಲ್ಪನಾ ತಮ್ಮ ಕನಸುಗಳ ಬೆನ್ನತ್ತಿದವರು. ಎಲ್ಲ ಸರಹದ್ದುಗಳನ್ನು ಮೀರಿ ಹಾರಿದವರು. ನಮ್ಮನ್ನು ಕಟ್ಟಿದ ದೈಹಿಕ, ಮಾನಸಿಕ, ಬೌದ್ಧಿಕ ಬೇಡಿಗಳನ್ನು ಕಿತ್ತೊಗೆದು ಸ್ವತಂತ್ರವಾಗಿ ಹಾರಬಹುದೆಂದು ತೋರಿದವರು. 'ನಿಮ್ಮ ಆಯ್ಕೆಯ ಬದುಕನ್ನು ಬದುಕಿ, ನೀವು ಇಚ್ಛಿಸುವುದನ್ನು ಮಾಡಿ, ಕನಸುಗಳ ಬೆನ್ನತ್ತಿ' ಎಂದ ಕಲ್ಪನಾ, ತಮ್ಮ ಕಾರ್ಯದಲ್ಲಿ ಅತ್ಯಂತ ಖುಷಿ ಮತ್ತು ತೃಪ್ತಿ ಕಂಡವರು. 'ಅಂತರಿಕ್ಷದಲ್ಲಿ ಈ ಎತ್ತರದಲ್ಲಿ ಪುಟ್ಟ ಚೆಂಡಿನಂತೆ ಉರುಳುವ ಭೂಮಿ ಎಷ್ಟು ಸುಂದರವಾಗಿ ಕಾಣುತ್ತಿದೆ. ನೆಲದ ಮೇಲೆ ಗೆರೆ ಎಳೆದು ಕಿತ್ತಾಡುವ ಮನುಷ್ಯನ ಕಲ್ಪಿತ ಬೇಲಿಗಳೊಂದೂ ಇಲ್ಲಿಂದ ಕಾಣುವುದಿಲ್ಲ, ಇಡೀ ಭೂಮಿ ಒಂದಾಗಿ ತಿರುಗುತ್ತಿದೆ. ಅದನ್ನು ಉಳಿಸಿಕೊಳ್ಳಬೇಕು, ಕಾಪಾಡಬೇಕು' ಕಲ್ಪನಾರ ಕರೆಯಾಗಿತ್ತು. ಯುದ್ಧಕ್ಕೆ ಕಾಲು ಕೆರೆದು ತುಡಿಯುತ್ತಿರುವ ಶಕ್ತ ದೇಶಗಳು ತಮ್ಮ ಅಸ್ತ್ರಶಸ್ತ್ರಗಳಿಂದ ಭೂಮಿಯನ್ನು ಸ್ಫೋಟಿಸುವ ಮೊದಲು ಒಮ್ಮೆ ಕಲ್ಪನರ 'ಆ ಅಂತರಿಕ್ಷದ ನೋಟ'ವನ್ನು ಕಾಣಬೇಕು. 'ಇಲ್ಲಿ ಅಂತರಿಕ್ಷದಲ್ಲಿ ನೀವು ಒಂದು ನೆಲದ ಒಂದು ತುಂಡಿಗೆ ಸೇರಿದವರೆನಿಸುವುದಿಲ್ಲ, ಈ ನಭದ, 'ಆಕಾಶಗಂಗೆ'ಯ ವಾಸಿ ನಾನು, ವಿಶ್ವದ ಪ್ರಜೆ ಎನಿಸುತ್ತದೆ' ಎಂದ ಕಲ್ಪನಾ ದಿಟದಲ್ಲಿ ವಿಶ್ವಮಾನವರಾದರು.

ಕಲ್ಪನಾ ಇಂದು ನಮ್ಮೊಂದಿಗಿಲ್ಲ, ಆದರೆ ಅವರ ಕನಸುಗಳು ನಮ್ಮೊಡನಿವೆ. 'ಏನು ಬೇಕಾದರೂ ಸಾಧಿಸಬಲ್ಲ' ಕನಸುಗಳವು. ನಮ್ಮ ಸಾಮರ್ಥ್ಯದಲ್ಲಿ ನಂಬಿಕೆ ಇಡುವುದನ್ನು ಕಲಿಸಿದರು. ಹೆಣ್ಣಿನ ಸಾಂಪ್ರದಾಯಿಕ ಬೇಡಿಕೆಗಳನ್ನು ತೊಡೆದು ಹಾಕಿದ ಈ ಹುಡುಗಿ, ಈ ನೆಲದ ಹೆಣ್ಣು ಮಕ್ಕಳು ನಭಕ್ಕೆ ಕೈಚಾಚುವಂತೆ ಮಾಡಿದರು. ಸಣ್ಣ ಊರಿನ ಹೆಣ್ಣು ಮಕ್ಕಳಿಗೂ ಕನಸು ಕಾಣುವ ಧೈರ್ಯವನ್ನು ತಂದು ಕೊಟ್ಟರು. ನಮ್ಮ ಸಾಮರ್ಥ್ಯದಲ್ಲಿ ನಮಗೇ ನಂಬುಗೆ ಮೂಡಿಸಿದರು. ಮತ್ತೊಮ್ಮೆ ನಮ್ಮ ಆದ್ಯತೆಗಳ ಪುನರ್ ವಿಮರ್ಶೆ ಮಾಡಿಕೊಳ್ಳೋಣ. ಕಲ್ಪನಾ ಹಚ್ಚಿರುವ ಭರವಸೆಯ ಹಣತೆಗಳು ಆರದಂತೆ ಕಾಪಾಡೋಣ.

ಕಲ್ಪನಾ ಅಂದೊಡನೆ ಇಂದು ನಮ್ಮ ಕಣ್ಣೆದುರಿಗೆ ಅವರ ಸಾವು ಮೂಡಿ ಬರುವುದಿಲ್ಲ. ಇಡೀ ಜಗತ್ತನ್ನೇ ಬೆಳಗುವಂತಹ ಇಷ್ಟಗಲ ನಗುವನ್ನು ಮುಖದಲ್ಲಿ ತುಂಬಿ ನಮಗೆ ಕೈಬೀಸಿ 'ಕೊಲಂಬಿಯಾ' ಹತ್ತುತ್ತಿದ್ದ ಕಲ್ಪನಾ ಅವರ ಚಿತ್ರವೇ ಕಣ್ಣ ಮುಂದೆ ನಿಲ್ಲುತ್ತದೆ. ನಮ್ಮೆಲ್ಲರನ್ನು ಸಾಧನೆಯ ಉತ್ತುಂಗಕ್ಕೆ ಕೈಬೀಸಿ ಕರೆಯುತ್ತಿರುವಂತೆ ಭಾಸವಾಗುತ್ತದೆ. ರಾಕೇಶ್ ಶರ್ಮ ಹೇಳುವಂತೆ 'ಸಚ್ ಸ್ಪಿರಿಟ್ಸ್ ಅಸ್ ಕಲ್ಪನಾ ಡು ನಾಟ್ ಡೈ, ದೆ ಲೀವ್ ಲೆಗೆಸೀಸ್'. ಕಲ್ಪನಾರಂತಹ ಚೇತನಗಳು ಸಾಯುವುದಿಲ್ಲ ಸ್ಫೂರ್ತಿಯ ಸೆಲೆಯಾಗಿ ಸದಾ ಜೀವಂತ. ಕಲ್ಪನಾ ಇಂದು ಕೇವಲ ಭಾರತದ ಹೆಣ್ಣುಮಕ್ಕಳಿಗಲ್ಲ, ವಿಶ್ವದ ಯುವಜನತೆಗೆ ಪರ್ಯಾಯ ಮಾದರಿಯಾಗಿ ಮಿನುಗಿದ್ದಾರೆ.

▼

# ಮಕ್ಕಳ ಮಾರಾಟದ ಕಥೆಯ ಹಿಂದಿನ ಸತ್ಯ — "ಮಕ್ಕಳಿಲ್ಲಿ ಮಾರಾಟಕ್ಕಿವೆ!

- ಹೇಮಲತಾ ಮಹಿಷಿ




ನಮ್ಮದೇ ರಾಜ್ಯದ ಅತ್ಯಂತ ಹಿಂದುಳಿದ ಜಿಲ್ಲೆ ಎನಿಸಿದ ಗುಲ್ಬರ್ಗಾದ ಚಿಂಚೋಳಿ ತಾಲ್ಲೂಕಿನಲ್ಲಿರುವ, ಈವರೆಗೆ ಅಜ್ಞಾತವಾಗಿಯೇ ಉಳಿದಿದ್ದ ಕೊಂಚಾವರಂ 2001ರಲ್ಲಿ ಇದ್ದಕ್ಕಿದ್ದಂತೆ ಇಡೀ ರಾಷ್ಟ್ರದ ಗಮನ ಸೆಳೆದುಬಿಟ್ಟಿತು. ಇದು ಯಾವುದೇ ಒಳ್ಳೆಯ ಕಾರ್ಯ ಮಾಡಿ ರಾಷ್ಟ್ರಕ್ಕೆ ಮಾದರಿಯಾದುದಕ್ಕಲ್ಲ ಇಲ್ಲಿಯ ಲಂಬಾಣಿ ತಾಂಡಾಗಳ ಮಕ್ಕಳ ಮಾರಾಟದ ಕಾರಣಕ್ಕಾಗಿ! ಎಲ್ಲಾ ಆಘಾತಕಾರಿ ಸುದ್ದಿಗಳಂತೆಯೇ ಇದೂ ಸ್ವಲ್ಪ ಕಾಲ ಬಿರುಗಾಳಿ ಎಬ್ಬಿಸಿ, ನಂತರ ತಣ್ಣಗಾಯಿತು. ಸಾಂಪ್ರದಾಯಿಕವಾದ ತನಿಖೆಗಳು, ಆಯೋಗಗಳೂ, ಪತ್ರಿಕಾವರದಿಗಳೂ ಕಾಣಿಸಿಕೊಂಡು ಕಣ್ಮರೆಯಾದವು. ಜನರ ನೆನಪಿನಿಂದ ಅಳಿಸಿಹೋದವು. ಆದರೆ, ಅದೇ ಜನಾಂಗದಿಂದ ಬಂದ ಸಂವೇದನಾಶೀಲ ಮಹಿಳೆಯಾಗಿ, ಪತ್ರಕರ್ತೆಯಾಗಿರುವ ಸೋದರಿ ಕೆ. ಜಿ. ನಾಗಲಕ್ಷ್ಮೀ ಬಾಯಿಯವರ ಮನದಾಳದಲ್ಲಿ ಈ ಆಘಾತಕಾರಿ ಸುದ್ದಿ ನೋವನ್ನು ಉಳಿಸಿಬಿಟ್ಟಿತ್ತು. ಒಂದು ವರ್ಷದ ನಂತರವೂ ಈ ನೋವು ಚುಚ್ಚುತ್ತಲೇ ಉಳಿದಾಗ ನಾಗಲಕ್ಷ್ಮಿ ನೋವಿನ ಮೂಲವನ್ನು ಹುಡುಕಿಕೊಂಡು ಹೊರಟು ಬಿಟ್ಟರು. ಚಿಂಚೋಳಿಯ ಬಿರುಬಿಸಿಲಿನಲ್ಲಿ, ಬರಡು ಭೂಮಿಯಲ್ಲಿ, ಶುಷ್ಕ ಬಯಲಿನಲ್ಲಿ, ನಾಗರೀಕ ಜಗತ್ತಿನಿಂದ ದೂರವಾಗಿ ವಾಸಿಸುತ್ತಿರುವ ಜನರ ನಡುವೆ ಸತ್ಯವನ್ನು ಅರಸಿ ಅಲೆದಾಡಿದರು, ಆ ಸವಲತ್ತು ವಂಚಿತ ಜನರನ್ನು ನೋಡಿ ನಿಟ್ಟುಸಿರಿಟ್ಟರು. ಮಹಿಳೆಯರ ದುಃಸ್ಥಿತಿಯನ್ನು ಕಂಡು ಕಂಗೆಟ್ಟರು. ಅವರ ಪುರುಷರ ಸ್ವಾರ್ಥವನ್ನು ಕಂಡು ಜಿಗುಪ್ಸೆಗೊಂಡರು. ಆ ಜನರ ಬಡತನ ನಿಸ್ಸಹಾಯಕತೆಯನ್ನು ದುರುಪಯೋಗ ಪಡಿಸಿಕೊಳ್ಳುತ್ತಿರುವ ನಾಗರೀಕ ಜನರ ಬಗ್ಗೆ ಕಿಡಿಗಾರಿದರು. ಇಂತಹ ಜನರ ಬಡತನ - ಅಸಹಾಯಕತೆಯ ಲಾಭ ಪಡೆದು ಅಧಿಕಾರಕ್ಕೆ ಬಂದರೂ, ಅವರನ್ನು ಕೊಂಚವೂ ಮೇಲೆತ್ತಲು ಬಯಸದ - ಪ್ರಯತ್ನಿಸದ ರಾಜಕಾರಣಿಗಳ ಬಗ್ಗೆ ರೋಷಗೊಂಡರು. ಒಬ್ಬ ಪತ್ರಕರ್ತೆಯಾಗಿ, ಸಮಾಜಶಾಸ್ತ್ರಜ್ಞೆಯಾಗಿ ನಾಗಲಕ್ಷ್ಮೀಬಾಯಿ ನಡೆಸಿದ ಸತ್ಯಶೋಧನೆಯ ಫಲವೇ ಈ ಪುಸ್ತಕ ರೂಪದ ವರದಿ.

ಇದೊಂದು ಅಂಕಿ - ಅಂಶಗಳನ್ನೊಳಗೊಂಡ ಶುಷ್ಕ ವರದಿಯಲ್ಲ, ನಮ್ಮ ನಡುವೆಯೇ ಇರುವ ಒಂದು ಮಾನವ ಗುಂಪಿನ ವಿಚಿತ್ರ ಸತ್ಯಕತೆ, ನಂಬಲಸಾಧ್ಯವಾದರೂ ನಂಬಬೇಕಾದ ನಗ್ನಸತ್ಯದ ಚಿತ್ರಣ. ಈ ಸತ್ಯವನ್ನು ಲೇಖಕಿ ಆಪ್ತಶೈಲಿಯಲ್ಲಿ ಸಂವೇದನಾಶೀಲತೆಯಿಂದ, ಸಹಾನುಭೂತಿಯಿಂದ ವಿಮರ್ಶಾತ್ಮಕವಾಗಿ, ಕೆಲವೊಮ್ಮೆ ರೋಷದಿಂದ ಚಿತ್ರಿಸಿದ್ದಾರೆ.

ತನ್ನದೇ ಆದ ಹೆಣ್ಣುಮಗುವನ್ನು ಮಾರಾಟ ಮಾಡುವ ತಾಯಿಯ ತಾಯ್ತನದ ದುರಂತವನ್ನು ವಿಶ್ಲೇಷಿಸಲು ಪ್ರಯತ್ನಿಸಿದ್ದಾರೆ. ಬಡತನವೊಂದೇ ಅಲ್ಲ, ಒಂದು ಸಮಾಜದಲ್ಲಿ ಹೆಣ್ಣಿನ ಬಗ್ಗೆ ಇರುವ ಕೀಳುಭಾವನೆ, ಹೆಣ್ಣು ಜೀವನದ ಎಲ್ಲ ಹಂತಗಳಲ್ಲಿ ಅನುಭವಿಸುತ್ತಿರುವ ದಾರುಣ ಯಾತನೆ, ದೈಹಿಕ - ಮಾನಸಿಕ ಕ್ರೌರ್ಯ, ಸಮುದಾಯದ ಅರ್ಥವಿಹೀನ ಸಂಪ್ರದಾಯಗಳು, ಅಜ್ಞಾನ, ಮೂಢನಂಬಿಕೆಗಳು ಹೇಗೆ ಈ ರೀತಿಯ ಹೆಣ್ಣುಮಕ್ಕಳ ಮಾರಾಟದಂತಹ ಅಮಾನವೀಯ ಸನ್ನಿವೇಶಗಳನ್ನು ಹುಟ್ಟುಹಾಕುತ್ತವೆ ಎನ್ನುವುದನ್ನು ಸರಿಯಾಗಿಯೇ ಗುರುತಿಸಿದ್ದಾರೆ.

ಶಿಕ್ಷಣ, ಉದ್ಯೋಗಾವಕಾಶ ಸಿಕ್ಕಲ್ಲಿ ಈ ಪರಿಸ್ಥಿತಿ ಸುಧಾರಿಸಬಹುದೆಂಬ ಆಶಾಭಾವನೆಯನ್ನು ವ್ಯಕ್ತಪಡಿಸುತ್ತಾರೆ. ರಾಜ್ಯಕ್ಕೆ ಮುಖ್ಯಮಂತ್ರಿಯನ್ನು ಕೊಟ್ಟಂತಹ, ಹಲವಾರು ಮಂತ್ರಿ ಮಹೋದಯರುಗಳನ್ನು, ರಾಜಕೀಯ ಘಟಾನುಘಟಿಗಳನ್ನು ಕೊಟ್ಟಂತಹ, ರಾಜಕೀಯವಾಗಿ ಬಲಿಷ್ಠವಾಗಿರುವ ಗುಲ್ಬರ್ಗಾದಂತಹ ಜಿಲ್ಲೆ ಇಂದಿಗೂ ರಾಜ್ಯದ ಅತ್ಯಂತ ಹಿಂದುಳಿದ ಭಾಗವಾಗಿರುವುದು, ಅನಕ್ಷರತೆ, ಬಡತನ, ಬಾಲ್ಯವಿವಾಹ, ಹೆಣ್ಣುಮಕ್ಕಳ ಮಾರಾಟದಂತಹ ಕಾರಣಕ್ಕಾಗಿ ಪ್ರಸಿದ್ಧರಾಗಿರುವುದು ಒಂದು ವಿಪರ್ಯಾಸ!

ಲೇಖಕಿಯು ಇಲ್ಲಿ ಲಂಬಾಣಿ ಮಹಿಳೆಯರ ಬಗ್ಗೆ ವಿಷಾದದಿಂದ ಹೇಳುವ ಅನೇಕ ವಿಷಯಗಳು ನಮ್ಮ ದೇಶದ ಒಟ್ಟಾರೆ

ಮಹಿಳೆಯರ ಬಗ್ಗೆ ಹೇಳಬಹುದಾದ ಮಾತುಗಳೇ ಆಗಿವೆ. ಹೆಣ್ಣುಮಕ್ಕಳನ್ನು ಮಾರಾಟ ಮಾಡುವ ಈ ಪರಿಸ್ಥಿತಿ, ತಮಿಳುನಾಡು ಸೇಲಂ ಜಿಲ್ಲೆಯಲ್ಲಿ ಹೆಣ್ಣುಮಕ್ಕಳನ್ನು ಹುಟ್ಟಿದಾಗಲೇ ಕೊಲ್ಲುವ ರೂಪ ತಾಳುತ್ತದೆ, ಕೊಲ್ಲಿ ದೇಶದ ವಯಸ್ಕ ಅರಬ್ ಶ್ರೀಮಂತನಿಗೆ ಹತ್ತು ವರ್ಷದ ಅಮೀನಾಳನ್ನು ಮದುವೆ ಮಾಡಿ ಕಳಿಸುವಂತಹ ಧಾರ್ಮಿಕ ರೂಪ ತಾಳುತ್ತದೆ. ದೊಡ್ಡ ಊರುಗಳಲ್ಲಿ ಗರ್ಭದಲ್ಲಿರುವ ಸ್ತ್ರೀಭ್ರೂಣವನ್ನು ಪತ್ತೆ ಹಚ್ಚಿ, ಗರ್ಭಪಾತ ಮಾಡಿಸುವ ಆಧುನಿಕ ವೈಜ್ಞಾನಿಕ ರೂಪವನ್ನು ತಾಳುತ್ತದೆ. ಯಾವುದೂ ಸಮಾಜಕ್ಕೆ 'ಶಾಕ್' ಕೊಡುವುದಿಲ್ಲ. ಪರಿಸ್ಥಿತಿಯನ್ನು ಬದಲಾಯಿಸಲೇಬೇಕೆಂಬ ಇಚ್ಛಾಶಕ್ತಿಯನ್ನು ತುಂಬುವುದಿಲ್ಲ. ಸ್ವಾತಂತ್ರ್ಯ ಬಂದು 55 ವರ್ಷಗಳಾದರೂ ಕೊಂಚಾವರಂ ಲಂಬಾಣಿ ತಾಂಡಾಗಳು ಇದ್ದಂತೆಯೇ ಉಳಿದಿವೆ, ಇನ್ನು ಹಲವಾರು ಶತಮಾನಗಳು ಕಳೆದರೂ ಹಾಗೆಯೇ ಉಳಿದಿರುತ್ತವೆ, ಸರ್ಕಾರಗಳ ನಿಷ್ಕ್ರಿಯತೆಗೆ ಸಾಕ್ಷಿಯಾಗಿ! ಹಾಗಾಗಲು ಬಿಡಬಾರದೆಂಬುದು ಈ ಪುಸ್ತಕದ ಹಿಂದಿರುವ ಆಶಯ, ಲೇಖಕಿಯ ಉದ್ದೇಶ. ಲೇಖಕಿ ತಮ್ಮ ಮೊನಚಾದ ಲೇಖನಿಯ ಕಟುವಾದ ಟೀಕೆಯ ಮೂಲಕ ಸತ್ತಂತಿರುವ ಆತ್ಮಗಳನ್ನು ಬಡಿದೆಬ್ಬಿಸುವುದರೊಂದಿಗೆ ಸರ್ಕಾರವನ್ನು ಕ್ರಿಯಾಶೀಲಗೊಳಿಸುವ, ಚುರುಕುಗೊಳಿಸುವ, ಸಮಸ್ಯೆಯ ಗಂಭೀರತೆಯನ್ನು ಅಧಿಕಾರ ಹಿಡಿದಿರುವ ರಾಜಕಾರಣಿಗಳಿಗೆ, ಅಧಿಕಾರಿಗಳಿಗೆ ಮನದಟ್ಟು ಮಾಡಿಸುವ ಧೈರ್ಯದ ಪ್ರಯತ್ನವನ್ನು ಮಾಡಿದ್ದಾರೆ. ಈ ಕಾರ್ಯದಲ್ಲಿ ಅನೇಕರು ವ್ಯಕ್ತಪಡಿಸಿರುವ ಎಚ್ಚರಿಕೆಗಳನ್ನು ಎದುರಿಸುವ ಸಾಹಸ ತೋರಿದ್ದಾರೆ. ಅನೇಕ ಶತ್ರುಗಳನ್ನು ಹುಟ್ಟುಹಾಕಬಹುದಾದ ಸಾಧ್ಯತೆಯನ್ನು ಮೀರಿದ್ದಾರೆ. ಸತ್ಯವನ್ನು ಅನಾವರಣಗೊಳಿಸುವ ಪತ್ರಕರ್ತರಿಗಿರಬೇಕಾದ ಮನಸ್ಥೈರ್ಯವನ್ನು ತೋರಿದ್ದಾರೆ. ಆ ಕಾರಣಕ್ಕೆ ಅಭಿನಂದನಾರ್ಹರು ಅವರು.

ಸರ್ಕಾರ ಈಗಲಾದರೂ ತನಿಖೆಗಳ, ಆಯೋಗದ ವರದಿಯನ್ನು ಬಹಿರಂಗಪಡಿಸಬೇಕು, ಒಪ್ಪಿಕೊಂಡು ಅದರಲ್ಲಿರುವ ಸಲಹೆಗಳನ್ನು ಕಾರ್ಯರೂಪಕ್ಕೆ ತರಬೇಕು. ತಾಂಡಾದ ಜನರ, ಮುಖ್ಯವಾಗಿ ಮಹಿಳೆಯರ ಜೀವನ ಸಹ್ಯಗೊಳಿಸಬೇಕು, ಮಾನವರಾಗಿ ಬಾಳಲು ಅನುಕೂಲ ಪರಿಸ್ಥಿತಿ ಕಲ್ಪಿಸಬೇಕು. ವಿದ್ಯುಚ್ಛಕ್ತಿ - ನೀರಿಲ್ಲದ, ನೆರಳಿಲ್ಲದ, ಶಾಲೆ ಇಲ್ಲದ, ಉದ್ಯೋಗವಿಲ್ಲದ ಕೊಂಚಾವರಂನಂತಹವು ಇತಿಹಾಸದ ಭಾಗವಾಗಬೇಕು, ಲಂಬಾಣಿಗಳಂತಹ ಸಮುದಾಯಗಳು ಮುಖ್ಯ ಪ್ರವಾಹದಲ್ಲಿ ಒಂದಾಗಬೇಕು, ನಮ್ಮ ಯಾವ ಕಾನೂನುಗಳು, ವ್ಯವಸ್ಥೆಗಳು, ನಿಯಮಗಳು ತಲುಪದ ಇಂತಹ ಸ್ಥಳಗಳನ್ನು ಗುರುತಿಸುವ ಕೆಲಸವಾಗಬೇಕು.

ಲಂಬಾಣಿ ತಾಂಡಾಗಳನ್ನು ಉಳಿದ ಹಳ್ಳಿಗಳಂತೆ ಪರಿಗಣಿಸಬೇಕು, ಹಳ್ಳಿಯ ಭಾಗಗಳನ್ನಾಗಿ ಮಾಡಬೇಕು, ಈ ಪ್ರತ್ಯೇಕತೆಯನ್ನು ತಪ್ಪಿಸಬೇಕು. ಪ್ರತಿ ಸಮುದಾಯಕ್ಕೂ ತನ್ನ ಭಾಷೆ - ಸಂಸ್ಕೃತಿಯನ್ನು ಕಾಪಾಡಿಕೊಳ್ಳುವ ಹಕ್ಕಿದ್ದರೂ ಅದು ಅಮಾನವೀಯ ರೂಢಿ - ಸಂಪ್ರದಾಯಗಳನ್ನು ರಕ್ಷಿಸುವ ಹಕ್ಕಾಗಬಾರದು. ಇಡೀ ಪ್ರಪಂಚ 21ನೇ ಶತಮಾನದಲ್ಲಿ ಕಾಲಿಟ್ಟಿರುವಾಗ ಯಾವುದೇ ಒಂದು ಪಂಗಡ ಮಧ್ಯಯುಗದಲ್ಲಿ ಉಳಿಯಬಾರದು.

ವಿಶ್ವನಾಥನ್ ಸಮಿತಿಯ ವರದಿ ಹಲವಾರು ಉಪಯುಕ್ತ ಸಲಹೆಗಳನ್ನು ನೀಡಿದೆ. ಅದರಲ್ಲಿ ಒಂದು - ದತ್ತು ಪ್ರಕ್ರಿಯೆ ಮತ್ತು ಕಾನೂನು ಬಗ್ಗೆ. ಬಹುಶಃ ದತ್ತಕದ ಬಗ್ಗೆಯ ಕಾನೂನು ವಿಧಿ-ವಿಧಾನಗಳು ಹೆಚ್ಚು ಸರಳವಾಗಿದ್ದಲ್ಲಿ ಹೆಣ್ಣುಮಕ್ಕಳ ಈ ರೀತಿಯ ಮಾರಾಟ, ಹತ್ಯೆಗಳು ಬಹುಶಃ ಕಡಿಮೆಯಾಗುತ್ತಿದ್ದವು. ದತ್ತಕ ಕಾನೂನು ಇಂದು ಬಿಗಿಯಾಗಿದ್ದರೂ ಕಾನೂನಿಗೆ ವಿರುದ್ಧವಾದ ಮಕ್ಕಳ ಮಾರಾಟ ನಡೆಯುತ್ತಲೇ ಇದೆ.

ಯಾವುದೇ ದಾಖಲೆಗಳಿಲ್ಲದೆ, ಅಂತರಾಷ್ಟ್ರೀಯ, ರಾಷ್ಟ್ರೀಯ ಮಟ್ಟದಲ್ಲಿ ಮಕ್ಕಳ ಸಾಗಾಣಿಕೆ ನಡೆದಿದೆ. ಸರ್ವೋಚ್ಚ ನ್ಯಾಯಾಲಯ ಹಾಕಿಕೊಟ್ಟ ಮಾರ್ಗದರ್ಶಿ ಸೂತ್ರಗಳ ಉಲ್ಲಂಘನೆ ನಡೆಯುತ್ತಲೇ ಇದೆ. ಹಲವಾರು ನೋಂದಾಯಿತ, ಪ್ರತಿಷ್ಠಿತ ಹಾಗೆಯೇ ಅನಧಿಕೃತ ಸಂಸ್ಥೆಗಳೂ ಇದರಲ್ಲಿ ಪಾಲುದಾರರಾಗಿವೆ. ಇದೊಂದು ಲಕ್ಷಾಂತರ ರೂಪಾಯಿಗಳ ವ್ಯವಹಾರವಾಗಿದೆ.

ಹಿಂದೂಗಳಿಗೆ ಮಾತ್ರ ದತ್ತಕ ಕಾನೂನು ಅನ್ವಯಿಸುತ್ತಿದ್ದು ಎಲ್ಲ ಧರ್ಮಗಳ ಅನುಯಾಯಿಗಳಿಗೆ ಅನ್ವಯಿಸುವ ಏಕರೂಪದ ಕಾನೂನಿಕ ಅವಶ್ಯಕತೆ ಇದೆ. ದತ್ತಕ ಕಾನೂನಿನಲ್ಲಿ ಒಂದೇ ಗಂಡು ಮಗು, ಒಂದೇ ಹೆಣ್ಣುಮಗುವನ್ನು ದತ್ತಕ ಮಾಡಿಕೊಳ್ಳುವ ನಿಯಮದ ಹಿಂದಿರುವ ನೀತಿಗೆ ಇಂದು ಅರ್ಥವಿಲ್ಲ. ಅದನ್ನು ತೆಗೆದುಹಾಕಬೇಕು. ಅದೇ ರೀತಿ, ಅವಿವಾಹಿತ, ವಿಚ್ಛೇದಿತ, ವಿಧವೆ ಮಹಿಳೆಗೆ ದತ್ತು ತೆಗೆದುಕೊಳ್ಳುವ ಹಕ್ಕಿದ್ದರೂ ವಾಸ್ತವದಲ್ಲಿ ಸಾಧ್ಯವಾಗುತ್ತಿಲ್ಲ. ತಂದೆ - ತಾಯಿ ಇಬ್ಬರೂ ಇರುವ ಕುಟುಂಬಕ್ಕೇ ದತ್ತುಕೊಡಬೇಕೆನ್ನುವ ನೀತಿ ಇದಕ್ಕೆ ಅಡ್ಡಿಯಾಗಿದೆ. ಅದನ್ನು ಸಡಲಿಸಬೇಕು. ನ್ಯಾಯಾಲಯದ ಮೂಲಕ ದತ್ತು ಪಡೆಯುವುದು ಸುಲಭವಾದಲ್ಲಿ, ಸರಳವಾದಲ್ಲಿ, ಹಣದ ಕೈದಾಟುವಿಕೆ ತಪ್ಪುತ್ತದೆ. ಅನೇಕ ಅನಾಥ ಮಕ್ಕಳಿಗೆ ಆಶ್ರಯ ಸಿಗುತ್ತದೆ.

ಕೊಂಚಾವರಂ ತಾಂಡಾಗಳ ಲಂಬಾಣಿಗಳ ಬಡತನದ, ಅಸಹಾಯಕತೆಯ ಶೋಷಣೆ ತಪ್ಪುತ್ತದೆ.


ಮಕ್ಕಳಿಲ್ಲಿ ಮಾರಾಟಕ್ಕಿವೆ

*(ಗುಲ್ಬರ್ಗಾ ಜಿಲ್ಲೆ ಕೊಂಚಾವರಂನ ಲಂಬಾಣಿ ತಾಂಡಾಗಳಲ್ಲಿ ನಡೆದ ಹೆಣ್ಣು ಶಿಶುಗಳ ಮಾರಾಟದ ಒಂದು ಅಧ್ಯಯನ)*

ಲೇಖಕಿ : ಕೆ. ಜಿ. ನಾಗಲಕ್ಷ್ಮಿಬಾಯಿ

ಪ್ರಕಾಶಕರು: ಕೆ. ಜಿ. ನಾಗಲಕ್ಷ್ಮಿಬಾಯಿ, ನಂ. 78, 4ನೇ ಅಡ್ಡರಸ್ತೆ, ಈಜುಕೊಳದ ಬಡಾವಣೆ, ಮಲ್ಲೇಶ್ವರಂ, ಬೆಂಗಳೂರು - 560 003

ಪುಟ - 74 ಬೆಲೆ ರೂ 80/- ವರ್ಷ - 2002

# ಸಕಲ ವಿದ್ಯಾಪ್ರವೀಣೆ ಸಾವಿನಿರ್ಮಡಿ

ಬೆಂಗಳೂರಿನ ಸರಕಾರಿ ಮ್ಯೂಝಿಯಂನಲ್ಲಿ ಪ್ರಾಚೀನ ವಿದುಷಿಯೊಬ್ಬಳ ಅಪರೂಪದ ಶಿಲಾಚಿತ್ರವಿದೆ. ಆಕೆಯ ಹುಡುಕಾಟ, ಕ್ಷೇತ್ರ ಕಾರ್ಯದಲ್ಲಿ ಒಂದು ಸ್ಮರಣೀಯ ಘಟನೆಯೇ!

ಬಿ. ಎಲ್. ರೈಸರು ಸಂಪಾದಿಸಿದ 'ಎಪಿಗ್ರಾಫಿಯ ಕರ್ನಾಟಕ'ದ ಹತ್ತನೆಯ ಸಂಪುಟದಲ್ಲಿ ಸಾವಿನಿರ್ಮಡಿ ಎಂಬ ಮಹಿಳೆಯ ಸ್ಮಾರಕ ಶಿಲೆ. ಕೋಲಾರಜಿಲ್ಲೆಯ ಚೌರಿಂಗ ಪೇಟೆ ತಾಲೂಕಿನ ಕಾರಬೆಲೆ ಎಂಬಲ್ಲಿದೆ, ಎಂಬ ಉಲ್ಲೇಖವಿತ್ತು. ಶೋಧ ನಡೆಸಿದಾಗ ಆ ಕಾರಬೆಲೆ (ಕಾರಹಳ್ಳಿ) ಈಗ ನಾಮಶೇಷವಾಗಿ ಹೋಗಿದೆ! ಎಂದು ತಿಳಿಯಿತು. 1928ರಲ್ಲಿ ಕೋಲಾರ ಜಿಲ್ಲೆಯವರೇ ಆದ ಡಾ|| ಆರ್. ಶೇಷಶಾಸ್ತ್ರಿಗಳ ನೇತೃತ್ವದಲ್ಲಿ ನಾನು, ನನ್ನ ಪತಿ, ಈ ಪ್ರಾಚೀನ ಸುಶಿಕ್ಷಿತೆಗಾಗಿ ಹುಡುಕಾಟ ಪ್ರಾರಂಭಿಸಿದೆವು.

ಕೋಲಾರ - ಬಂಗಾರಪೇಟೆ ಮಾರ್ಗದಲ್ಲಿ ಯರಗಲ್ ಎಂಬ ಹಳ್ಳಿಯಲ್ಲಿ ಕುರುಬರ ದೇವಾಲಯದಲ್ಲಿ ಹರಡಿದ ಹತ್ತಾರು ವೀರಗಲ್ಲುಗಳ ನಡುವೆ ಈ ಸ್ಮಾರಕ ಇದ್ದಂತಿದೆ! ಎಂಬ ಸಮಾಚಾರ ಶೇಷಶಾಸ್ತ್ರಿಗಳಿಗೆ ಸಿಕ್ಕಿತು. ಹುಣಸೇಮರವೊಂದರ ನೆರಳಲ್ಲಿ ಅರ್ಧಹೂತು ಹೋಗಿದ್ದ ಎರಡೇ ಸಾಲಿನ ಶಾಸನಲಿಪಿಯಿದ್ದ ಮಹಿಳೆಯೊಬ್ಬಳಿಗೆ ನಿಲ್ಲಿಸಿದ ನೆನಪಿನ ಕಲ್ಲನ್ನು ಹಳ್ಳಿಗರ ಸಹಾಯದಿಂದ ಅಗೆದು ಹೊರತೆಗೆದಾಗ, ಕಣ್ಣನ ತಣಿಸುವ ತರುಣ ಸನ್ಯಾಸಿನಿಯೊಬ್ಬಳ ಸುಂದರ ಶಿಲ್ಪ ಕಾಣಿಸಿತು!

ನಾಲ್ಕು ಅಡಿ ಎತ್ತರ, ಎರಡುವರೆ ಅಡಿ ಅಗಲ ಇರುವ ಶಿಲೆಯ ಮೇಲ್ಭಾಗದಲ್ಲಿ "ಸ್ವಸ್ತಿ ಶ್ರೀ ನಾಗಾರ್ಜುನಯ್ಯ ನಂದಿಗಬೆಯ ಮಗಲ್ ಸಾವಿನಿರ್ಮಡಿ ಸರ್ವಶಾಸ್ತ್ರಪ್ರಸಿದ್ಧಿ ಶ್ರೀ" ಎಂಬ ಎರಡು ಸಾಲುಗಳನ್ನು ಕಂಡರಿಸಲಾಗಿದೆ. ಬೋಧನ ಭಂಗಿಯಲ್ಲಿ ಆಸೀನಳಾದ ತರುಣಿಯ ಎಡಭಾಗದಲ್ಲಿ ವ್ಯಾಸಪೀಠವಿದೆ. ಆಕೆ ಸಕಲ ಶಾಸ್ತ್ರ ಪ್ರವೀಣೆಯಾಗಿದ್ದಳು, ಎಂಬುದರ ದ್ಯೋತಕವಾಗಿ ಎಡಗೈಯಲ್ಲಿ ಅಕ್ಷರದ ಮೇಲೆ ಆಕೆಯ ಒಂದು ಬೆರಳಿದ್ದುದರಿಂದ 'ಶ್ರೀಹ ಸಿದ್ಧಿ' ಎಂದಿಷ್ಟೇ ಓದಬಹುದಾಗಿದೆ. ಸ್ಪಷ್ಟವಾಗದ ಅಥವಾ ಕಾಣಿಸದೇ ಹೋದ ಅಕ್ಷರ 'ರ' ಅಥವಾ 'ರಿ' ಎಂದು ಊಹಿಸಲು ಸಾಧ್ಯ. ಕೇವಲ ತಂದೆ, ತಾಯಿಯ ಹೆಸರು ನಮೂದಿಸಿದ್ದರಿಂದ ಆಕೆ ಅವಿವಾಹಿತಳಿರಬೇಕು. ಕೂದಲು ಜಟೆಯನ್ನು ಹೋಲುತ್ತಿರುವುದರಿಂದ ಸನ್ಯಾಸಿನಿಯಾಗಿರಬಹುದೇ? ಹಾಗಿದ್ದರೆ ಮಠ, ಗುರುಗಳ ಅಥವಾ ಪಂಥದ ಉಲ್ಲೇಖ ಇರಬೇಕಿತ್ತು. ಬಹುಶಃ ಸ್ವಂತ ಪ್ರೇರಣೆಯಿಂದ ಅವಿವಾಹಿತೆಯಾಗಿ ಉಳಿದು, ಶಾಸ್ತ್ರಾಧ್ಯಯನದಲ್ಲಿ ಮೇಲುಗೈಯಾಗಿ ಬೆಳೆಯುತ್ತ ತಾಯ್ತಂದೆಗಳ ಕಣ್ಮಣಿಯಾಗಿದ್ದ ಈ ತರುಣಿ ಯಾವುದೋ ಅರಿಯದ ಕಾರಣಕ್ಕಾಗಿ ಅಕಾಲ ಮೃತ್ಯುವಿಗೆ ಆಹುತಿಯಾಗಿರಲು ಸಾಕು. ಅವಳ ಬೋಧನಾಕ್ರಮದಿಂದ ಪ್ರಭಾವಿತರಾಗಿದ್ದ ಜನ ಈ ನೆನಪಿನ ಕಲ್ಲನ್ನು ನಿಲ್ಲಿಸಿದ್ದಾರೆ. ಅರಸ, ಮಾಂಡಲಿಕ, ಗುರುಪರಂಪರೆ ಯಾವುದರ ಉಲ್ಲೇಖನವೂ ಇಲ್ಲದ್ದರಿಂದ ಕೇವಲ ಸ್ವಾಧ್ಯಾಯದಿಂದಲೇ ಆಕೆ ಶಾಸ್ತ್ರ ಸಿದ್ಧಿ ಪಡೆದಿರಬಹುದೇ? ಎಂಬುದು ವಿಸ್ಮಯಕಾರಿ ಅಂಶವಾಗಿದೆ.

ಏನೇ ಇದ್ದರೂ ಪ್ರತಿಭಾವಂತ ಮಹಿಳೆಯರಿಗೆ ಹತ್ತನೆಯ ಶತಮಾನದಲ್ಲಿ (ಶಾಸನ ಲಿಪಿ 10ನೇ ಶತಮಾನದ್ದು) ಸಹ ಉಚ್ಚಶಿಕ್ಷಣದ ಸೌಕರ್ಯಗಳು ಇಲ್ಲದಿದ್ದರೆ, ಸಾವಿನಿರ್ಮಡಿ ಸಕಲ ಶಾಸ್ತ್ರ ಪ್ರವೀಣೆ ಆಗುತ್ತಿರಲಿಲ್ಲ ಮತ್ತು ಜನ ಅವಳ ವಿದ್ವತ್ತೆಯನ್ನು ಗುರುತಿಸುತ್ತಿರಲಿಲ್ಲ, ಅವಳಿಗಾಗಿ ಸ್ಮಾರಕ ಕಲಾಚಿತ್ರ ನಿಲ್ಲಿಸುತ್ತಿರಲಿಲ್ಲ ಎಂಬುದು ಸ್ಪಷ್ಟ

- *ಡಾ|| ಜ್ಯೋತ್ಸ್ನಾ ಕಾಮತ್*

▼

## ಆತ್ಮ ಹತ್ಯೆಯಲ್ಲಿ ಕರ್ನಾಟಕಕ್ಕೆ 5ನೇ ಸ್ಥಾನ

ವಿಶ್ವದಾದ್ಯಂತ ಆತ್ಮಹತ್ಯೆ ಪ್ರಕರಣಗಳ ಸಂಖ್ಯೆಯಲ್ಲಿ ಭಾರತವು 5ನೇ ಸ್ಥಾನದಲ್ಲೂ ಭಾರತದಲ್ಲಿ ಕರ್ನಾಟಕ ರಾಜ್ಯವೂ, 5ನೆಯ ಸ್ಥಾನ ಪಡೆದಿದೆ. ಇದಕ್ಕೆ ಪ್ರಮುಖ ಕಾರಣಗಳಲ್ಲಿ ಕೌಟುಂಬಿಕ ಕಲಹ, ವರದಕ್ಷಿಣೆ ವಿವಾಹ, ಭಗ್ನ ಪ್ರೇಮ ಮತ್ತು ನಿರುದ್ಯೋಗಗಳಾಗಿವೆ. ಕರ್ನಾಟಕ ರಾಜಧಾನಿಯಾದ ಬೆಂಗಳೂರು ಆತ್ಮಹತ್ಯೆ ಪ್ರಕರಣಗಳಲ್ಲಿ ರಾಷ್ಟ್ರದಲ್ಲೇ 1ನೇ ಸ್ಥಾನವನ್ನು ಪಡೆದಿರುವುದು ದುಃಖಕರ ವಿಷಯ. ಆತ್ಮಹತ್ಯೆ ಮಾಡಿಕೊಳ್ಳುವವರಲ್ಲಿ ಅರ್ಧಕ್ಕಿಂತ ಹೆಚ್ಚು (ಶೇಕಡ 53) 15ರಿಂದ 29 ವರ್ಷದೊಳಗಿನವರು ಮತ್ತು 30 ವರ್ಷದಿಂದ 49 ವರ್ಷದೊಳಗಿರುವವರಲ್ಲಿ ಶೇಕಡ 34 ಇರುವುದು ಈ ಆತ್ಮಹತ್ಯೆ ಮಾಡಿಕೊಳ್ಳುವವರಲ್ಲಿ ಶೇಕಡ 95 ಮಂದಿ ಮಧ್ಯಮ ವರ್ಗದ ಕುಟುಂಬಕ್ಕೆ ಸೇರಿದವರಾಗಿರುವುದು ಹಾಗೂ ಈ ಬಗ್ಗೆ ತ್ವರಿತವಾದ ಪರಿಹಾರ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಬೇಕಾದ ಅವಶ್ಯಕತೆಯನ್ನು ಸೂಚಿಸುತ್ತದೆ.

# ಮಹಿಳಾ ವಾದ ಮತ್ತು ಮಹಿಳಾ ಸಂವೇದನೆ

ಶ್ರೀ ಅರವಿಂದ ಚೊಕ್ಕಾಡಿಯವರು ಹೇಳಿದಂತೆ ಮಹಿಳಾವಾದವನ್ನು ಓರ್ವ ಆರೋಗ್ಯಪೂರ್ಣ ಮನಸ್ಸಿನ ಪುರುಷನೋರ್ವ ಸಮರ್ಥವಾಗಿ ಬಿಂಬಿಸಬಲ್ಲ ಎಂಬ ಮಾತನ್ನು ನಾನೂ ಒಪ್ಪುತ್ತೇನೆ. ನಮ್ಮ ಗತಕಾಲದ ಪುಟಗಳನ್ನು ತಿರುವಿ ನೋಡಿದಾಗ ಮಹಿಳಾ ಉದ್ಧಾರಕ್ಕೆಂದೇ ಶ್ರಮಿಸಿದವರಲ್ಲಿ ಮುಖ್ಯರಾಗುವುದು ಶ್ರೀ ರಾಜರಾಮಮೋಹನ್‌ರಾಯ್, ದಯನಂದ ಸರಸ್ವತಿಯವರಂಥಹ ಕೆಲ ಪುರುಷ ಮಹನೀಯರುಗಳೇ ಮುಖ್ಯರಾಗುತ್ತಾರೆ. ಸತೀ ಪದ್ಧತಿ, ಬಾಲ್ಯವಿವಾಹದಂಥಹ ಅನಿಷ್ಟ ಪದ್ಧತಿಗಳ ಹೋರಾಟದ ಮುಂಚೂಣಿಯಲ್ಲಿರುವವರು ಪುರುಷರೇ ಆದರೆ ಮಹಿಳಾ ಸಂವೇದನೆಯಲ್ಲಿ ಪುರುಷನೊಬ್ಬನಿಗೆ ಪೂರ್ಣ ಅಭಿವ್ಯಕ್ತತೆ ಸಾಧಿಸಲಾಗುವುದಿಲ್ಲವೆಂಬ ಮಾತನ್ನು ಪೂರ್ತಿ ಒಪ್ಪಲಾಗುವುದಿಲ್ಲ. ವರದಕ್ಷಿಣೆಯ ಧಾಳಿಗೆ ಸಿಕ್ಕಿ ಜರ್ಜರಿತಗೊಂಡ ಓರ್ವ ಹೆಣ್ಣುಮಗಳ ಪಾಡನ್ನು ಆಕೆಯ ಹೆತ್ತ ತಂದೆಯಲ್ಲದೆ ಬೇರಾರಿಗೂ ಹೃದಯಂಗಮವಾಗಿ ನಿವೇದಿಸಿಕೊಳ್ಳಲಾಗುವುದಿಲ್ಲ. ಪ್ರಾಯಕ್ಕೆ ಬಂದ ಅವಿವಾಹಿತ ಹೆಣ್ಣು ಮಗಳನ್ನು ಬಿಟ್ಟಗಲುವ ತಂದೆಯ ಮರಣಶಯ್ಯೆಯ ದುಃಖ ಹೆತ್ತ ತಾಯಿಗಿಂತಲೂ ಮಿಗಿಲಾಗಿರುತ್ತೆ. ಒಟ್ಟಿನಲ್ಲಿ ಹೆಣ್ಣಾಗಲೀ, ಗಂಡಾಗಲೀ ಅವರ ಹೃದಯದಲ್ಲಿ ಮಾನವೀಯತೆ ಸೆಲಲೆ ಚಿಮ್ಮುವ ಒರತೆ ಇದ್ದಲ್ಲಿ ಮಹಿಳಾ ಸಂವೇದನೆಯನ್ನು ಗುರುತಿಸಬಲ್ಲರು. ಅನುಭವಿಸಬಲ್ಲರು.

ಮಹಿಳಾ ಹಕ್ಕುಗಳ ಸುಧಾರಣೆ, ಆಕೆ ಆರ್ಥಿಕ ಸ್ವತಂತ್ರತೆ ಸಾಧಿಸಿದರೆ ಮಾತ್ರ ಯಶಸ್ವಿಯಾಗುತ್ತದೆ ಎಂಬ ಮಾತಿಗೆ ಇದಿರಿಲ್ಲ. ಆದರೆ ಮಹಿಳೆಗೆ ಬರೇ ಆರ್ಥಿಕ ಸ್ವತಂತ್ರತೆ ಒದಗಿದರೆ ಸಾಲದು. ಈವತ್ತಿನ ಚುಲಾಕಿ ಜಗತ್ತಿನಲ್ಲಿ ಆಕೆ ತನಗೊದಗಿದ ಆರ್ಥಿಕ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಬೇಕಾದಲ್ಲಿ ಅದನ್ನು ಸ್ಥಿರವಾಗಿ ಕಾಪಾಡಿಕೊಳ್ಳುವಷ್ಟು ಬುದ್ಧಿ ವಿವೇಚನೆಯನ್ನು ಹೊಂದಿರಬೇಕಾಗುತ್ತೆ. ಶ್ರೀಮಂತ ವಿಧವೆಯರು, ಅವಿವಾಹಿತ ಹೆಣ್ಣುಮಕ್ಕಳು ತನ್ನ ಸುತ್ತಲಿನ ಬಂಧು-ಬಳದವರಿಂದಲೇ ಮೋಸಕ್ಕೊಳಗಾಗಿ ತನ್ನಪಾಲಿಗೆ ಬಂದ ಎಲ್ಲಾ ಆಸ್ತಿ ಸಂಪತ್ತುಗಳನ್ನು ಕಳೆದುಕೊಂಡ ಎಷ್ಟೋ ದೃಷ್ಟಾಂತಗಳಿವೆ. ಅದಲ್ಲದೆ ತನ್ನ ಹಕ್ಕಿನ ಮೂಲದ ಶೋಧನೆ ಮಾಡಿ, ತನಗೆ ನ್ಯಾಯಯುತವಾಗಿ ಸಿಗುವ ಸವಲತ್ತುಗಳನ್ನು ತನ್ನ ಕುಟುಂಬ ವರ್ಗದಿಂದ ದೊರಕಿಸಿಕೊಳ್ಳುವಲ್ಲಿ ಆಕೆ ಸಫಲಳಾಗಬೇಕು. ಕರ್ನಾಟಕದಲ್ಲಿ 1993ರ ನಂತರ ಪಿತ್ರಾರ್ಜಿತ ಆಸ್ತಿಯಲ್ಲೂ ಹೆಣ್ಣು ಮಕ್ಕಳಿಗೆ ಸಮಪಾಲು ಎಂಬ ಮಸೂದೆ ಬಂತು. ಆದರೆ ಎಷ್ಟು ಜನ ಹೆಣ್ಣುಮಕ್ಕಳು ಈ ಸವಲತ್ತು ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ. ತಮಗೆ ಸಿಗುವ ಆಸ್ತಿ ಹಕ್ಕಿಗಾಗಿ ನ್ಯಾಯಾಲಯದ ಮೆಟ್ಟಲು ಹತ್ತಿದವರ ಸಂಖ್ಯೆ ಇಲ್ಲವೆಂದೇ ಹೇಳಬಹುದು. ಓರ್ವ ಹೆಣ್ಣು ಮಗಳು ಆರ್ಥಿಕವಾಗಿ ಸಂಪನ್ನಳಾಗಿದ್ದರೂ ಆಕೆಗೆ ಸ್ವತಂತ್ರವಾಗಿ ಬದುಕಲು ಸಿಗುವ ಅವಕಾಶಗಳಿಗೆ ಈ ಸಮಾಜ ಎಷ್ಟೋ ತಡೆಯುಂಟು ಮಾಡುತ್ತದೆ. ಉದಾ:- ಅವಿವಾಹಿತ ಹೆಣ್ಣು ಮಗಳೊಬ್ಬಳು ಸ್ವತಂತ್ರವಾಗಿ ಒಬ್ಬಳೇ ನಿಲ್ಲುತ್ತೇನೆಂದಾಗ, ಆಕೆಯನ್ನು ಹೆದರಿಸುವುದು ಕುಟುಂಬ, ಸ್ನೇಹಿತ ವರ್ಗದವರು ಕೊನೆಗೊಮ್ಮೆ ಆಕೆ ದುಡಿಯುವವಳಾಗಿದ್ದರೆ ತನ್ನ ಸಂಪತ್ತನ್ನೆಲ್ಲಾ ತವರು ಮೂಲದವರಲ್ಲಿ ಬಿಟ್ಟು ಅವರ ಆಶ್ರಯಕೋರುವಂಥಹ ಸನ್ನಿವೇಶ ತಂದೊಡ್ಡುತ್ತಾರೆ. ಆಕೆಯ ಮಾನಸಿಕ ಕುಬ್ಜತೆಯನ್ನು ಇನ್ನಷ್ಟು ಹಿರಿದಾಗಿಸುತ್ತಾರೆ. ಇದೆಲ್ಲಾ ಅಡ್ಡಿ ಆತಂಕಗಳನ್ನು ನಿವಾರಿಸಿಕೊಂಡು ಸ್ವತಂತ್ರಳಾಗಬಯಸುವ ಹೆಣ್ಣು ಮುಂದೆ ಇಡಲು ಆತ್ಮ ಸ್ಥೈರ್ಯದೊಂದಿಗೆ ವ್ಯವಹಾರ ಜ್ಞಾನವೂ ಅಗತ್ಯ. ಹೀಗೆ ಆರ್ಥಿಕ ಸ್ವಾತಂತ್ರ್ಯದೊಂದಿಗೆ ಸ್ತ್ರೀ ವಿವೇಚನೆಯೂ ಮಿಳಿತವಾದಲ್ಲಿ ಆದರ್ಶ ಪರ ಸ್ವಾವಲಂಬಿ ಹೆಣ್ಣೊಬ್ಬಳ ಪ್ರತಿಮೆ ಮಾಡಬಲ್ಲದು.

– ಕೆ. ಶ್ರೀಲತಾ ಉಡುಪ

▼

ಸಮಾಜದಲ್ಲಿ ಮಹಿಳೆಯರು ಮತ್ತು ಪುರುಷರು ಒಂದು ನಾಣ್ಯದ ಎರಡು ಮುಖಗಳು. ನಾಣ್ಯದ ಒಂದು ಮುಖ ಊನವಾಗಿದ್ದರೆ ಮತ್ತೊಂದು ಮುಖದ ಚಲಾವಣೆಯಾಗುವುದಿಲ್ಲ. ಪುರುಷರು ಮಹಿಳೆಯರನ್ನು ಶೋಷಿಸಿದರೆ, ಹಿಂಸಿಸಿದರೆ, ತುಳಿದರೆ ಮಹಿಳೆಯರಿಗೆ ಕಾನೂನಿನ ರಕ್ಷಣೆ ಬೇಕಾಗುತ್ತದೆ ''ಭಾರತದ ಜನಸಂಖ್ಯೆಯಲ್ಲಿ ಅರ್ಧದಷ್ಟು ಮಹಿಳೆಯರಿದ್ದರೂ ಸಹ ಅವರು ಮೌನವಾಗಿ ತಾರತಮ್ಯವನ್ನು ಅನುಭವಿಸುತ್ತಿದ್ದಾರೆ'' ಎಂದು ಸರ್ವೋಚ್ಛ ನ್ಯಾಯಾಲಯದ ತೀರ್ಪಿನಲ್ಲಿ ಅಭಿಪ್ರಾಯಪಡಲಾಗಿದೆ.

*ನಮ್ಮ ರೈತರಿಗೆ ನಾನಾ ರೀತಿಯಲ್ಲಿ ನೆರವಾಗಬಲ್ಲ !*

# ರೈತ ಮಿತ್ರ

ರೈತ ಸಮುದಾಯದ ಜೀವನ ಮಟ್ಟವನ್ನು ಸುಧಾರಿಸುವ ನಿಟ್ಟಿನಲ್ಲಿ ಕರ್ನಾಟಕ ಸರ್ಕಾರವು ರೈತ ಮಿತ್ರ ಯೋಜನೆಯನ್ನು ಜಾರಿಗೊಳಿಸಿದೆ. ಕೃಷಿರಂಗದ ಅಭಿವೃದ್ಧಿ ಮತ್ತು ವಿಸ್ತರಣೆಯಲ್ಲಿ ಪ್ರಮುಖ ಮೈಲಿಗಲ್ಲೆನಿಸುವ ಈ ಯೋಜನೆ ರೈತರ ಬದುಕನ್ನು ಹಸನುಗೊಳಿಸುವಲ್ಲಿ ಮಹತ್ತರ ಪಾತ್ರವಹಿಸುತ್ತಿದೆ.

ಈ ಯೋಜನೆಯಡಿ, ಪ್ರತಿ ಹೋಬಳಿಗೊಂದರಂತೆ ಇರುವ 744 ರೈತ ಸಂಪರ್ಕ ಕೇಂದ್ರಗಳು ಕೃಷಿ ಹಾಗೂ ಇತರ ಕೃಷಿ ಚಟುವಟಿಕೆಗಳಿಗೆ ಸಂಬಂಧಿಸಿದ ಸಮಸ್ಯೆಗಳಿಗೆ ಪರಿಹಾರ ಒದಗಿಸುತ್ತವೆ.

## ನಿಮಗಿದು ತಿಳಿದಿರಲಿ

ರೈತರು ಕೆಳಕಾಣಿಸಿದ ವಿಷಯಗಳಿಗಾಗಿ ರೈತ ಸಂಪರ್ಕ ಕೇಂದ್ರವನ್ನು ಸಂಪರ್ಕಿಸಬಹುದು.

★ ಮಣ್ಣು ಮತ್ತು ಬೀಜ ಪರೀಕ್ಷೆ ಹಾಗೂ ನೀರು ನಿರ್ವಹಣೆ

★ ಕೃಷಿ ಪರಿಕರ ಮತ್ತು ಸಲಕರಣೆಗಳ ಮಾರಾಟ ಹಾಗೂ ವಿತರಣೆ

★ ರಸಗೊಬ್ಬರ ಮತ್ತು ಪೋಷಕಾಂಶಗಳ ನಿರ್ವಹಣೆ

★ ಸಾವಯವ ಗೊಬ್ಬರದ ಮಾರಾಟ ಮತ್ತು ವಿತರಣೆ

★ ಸಮಗ್ರ ಪೀಡೆಗಳ ನಿಯಂತ್ರಣ

★ ಮಿಶ್ರ ಬೆಳೆ

★ ಬೆಳೆ ವಿಮೆ

★ ಸಮಗ್ರ ಕೃಷಿ ಅಭಿವೃದ್ಧಿ ಕಾರ್ಯಕ್ರಮಗಳು

★ ಕೃಷಿ ಉತ್ಪನ್ನಗಳ ಕಾರ್ಯಕ್ರಮಗಳು

★ ಕೃಷಿ ತರಬೇತಿ

ನಿಮ್ಮ ಹೋಬಳಿಯಲ್ಲೊಂದು ರೈತ ಸಂಪರ್ಕ ಕೇಂದ್ರವಿದೆ. ನಿಮ್ಮ ಕೃಷಿ ಸಮಸ್ಯೆಗಳಿಗೆ ಇಲ್ಲಿಗೆ ಭೇಟಿ ನೀಡಿ. ಪ್ರತಿ ಕೇಂದ್ರದಲ್ಲಿ ಕೃಷಿ ಪದವೀಧರ ಮುಖ್ಯಸ್ಥರಿದ್ದು, ಸಮಸ್ಯೆಗಳನ್ನು ಪರಿಹರಿಸುವರು.

**ಬೇಸಾಯಕ್ಕೆ ಬಲ - ಸಾಧನೆಗೆ ಛಲ**

*- ಕರ್ನಾಟಕ ವಾರ್ತೆ*

# ದೇವಸ್ತ್ರೀಯರು

- ಡಾ|| ಶೈಲಜಾ ಹಿರೇಮಠ

ಲೈಂಗಿಕ ದಾಸಿಯರನ್ನು ಸಮಾಜಶಾಸ್ತ್ರದ ನೆಲೆಯಲ್ಲಿಟ್ಟು ವಿಶ್ಲೇಷಿಸುವ ಗಂಭೀರ ಪ್ರಯತ್ನ ಜೋಗನ್ ಶಂಕರ್, ಗುರುಮೂರ್ತಿಯವರಿಂದ ನಡೆದಿದೆಯಾದರೂ ನನಗದು ತೃಪ್ತಿಕರವಾಗಿ ಕಂಡಿಲ್ಲ. ಪಾತರ, ಬಸವಿ, ಮುರುಳಿ, ಕಸಬಿ ಮೊದಲಾದವರನ್ನೆಲ್ಲ 'ದೇವದಾಸಿ' ಎಂದು ಸಾಮಾನ್ಯೀಕರಿಸಿ, ಅಧ್ಯಯನ ಮಾಡಿದ ಫಲಶ್ರುತಿ ಅಷ್ಟು ಪರಿಣಾಮಕಾರಿಯಾಗದು. ಲೈಂಗಿಕ ದಾಸಿಯರಲ್ಲಿ ಕಂಡುಬರುವ ಪ್ರತಿಯೊಂದು ಪಂಗಡದವರ ಅಧ್ಯಯನ ಪ್ರತ್ಯೇಕವಾಗಿಯೇ ನಡೆಯಬೇಕಾಗಿದೆ. ಅದಕ್ಕೆ ಸ್ತ್ರೀವಾದಿ ಚಿಂತನೆಯ ಸ್ಪರ್ಶದ ಅಗತ್ಯವಿದೆ. ಅಂದಾಗ ಮಾತ್ರ ಅದರ ಮೂಲ ಬೇರುಗಳನ್ನು ಹುಡುಕಲು, ಅದಕ್ಕೆ ಪರಿಹಾರಗಳನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ.

ನೈತಿಕ - ಅನೈತಿಕ ಮೌಲ್ಯಗಳನ್ನಿಟ್ಟು ದೇವಸ್ತ್ರೀಯರಂತಹ ಸಮಸ್ಯೆಯನ್ನು ವಿಶ್ಲೇಷಿಸಬಾರದು. ತಲೆತಲಾಂತರದಿಂದ ಒಪ್ಪಿಕೊಂಡ ನೀತಿ - ಅನೀತಿಯಂತಹ ಮೌಲ್ಯಗಳು ಪುರುಷಶಾಹಿ ಸಂಸ್ಕೃತಿಯ ತಾತ್ವಿಕ ಚಿಂತನೆಗಳಾಗಿವೆ. ಈ ಮೌಲ್ಯಗಳನ್ನಿಟ್ಟು ಅಧ್ಯಯನ ಮಾಡುವುದೆಂದರೆ ಪುರುಷದೃಷ್ಟಿಕೋನದಿಂದಲೇ ಅಧ್ಯಯನ ಮಾಡುವುದಾಗಿರುತ್ತದೆ. ಇಂತವುಗಳನ್ನು ಇಟ್ಟುಕೊಂಡೇ ಲೈಂಗಿಕ ದಾಸಿಯರಂತಹ ಅನೇಕ ಸಂಪ್ರದಾಯಗಳನ್ನು ದೂಷಿಸುವುದ ಸುಲಭ. ನೈತಿಕ ಸಿಟ್ಟನ್ನು ತೋರಿಸುವುದು ಇನ್ನು ಸರಳ. ಆದರಿಂದಾಗಿ ಹೊಸದಾಗಿ ಏನನ್ನೂ ಹೇಳಿದಂತಾಗುವುದಿಲ್ಲ. ಹೀಗಾದಾಗ ಮಹಿಳಾ ಚರಿತ್ರೆಗೆ ನ್ಯಾಯವೊದಗಿಸುವುದು ಕನಸಿನ ಮಾತಾಗುತ್ತದೆ. ಅದಕ್ಕಾಗಿ ಅಸ್ತಿತ್ವ ಹಾಗೂ ಆರೋಗ್ಯವನ್ನು ಕೇಂದ್ರವಾಗಿರಿಸಿಕೊಂಡು ಇಂತಹ ವಿಷಯವನ್ನು ಪ್ರವೇಶಿಸುವುದು, ಚಿಂತನೆಗೊಳಪಡಿಸುವುದು ಹೆಚ್ಚು ಸೂಕ್ತ.

ಲೈಂಗಿಕ ದಾಸಿಯರ ವ್ಯವಸ್ಥೆಯ ಕುರಿತು ಮಾತನಾಡುವ ಮತ್ತು ಬರೆಯುವ ಬಹುಪಾಲು ಸಮಾಜಸೇವಕರು ಹಾಗೂ ಅಧ್ಯಯನಕಾರರು ''ಅವರು ನೀತಿಬಾಹಿರರು, ಕೊಳಕಾಗಿರುವವರು. ಅವರನ್ನು ನೈತಿಕ ಚೌಕಟ್ಟಿನೊಳಗೆ ಒಳತರುತ್ತಿದ್ದೇವೆ'' ಎನ್ನುವ ಅಹಂ ಹೊತ್ತುಕೊಂಡೇ ಇಂತಹ ಕ್ಷೇತ್ರಗಳನ್ನು ಪ್ರವೇಶಿಸುತ್ತಾರೆ. ಅವರ ಬದುಕಿನ ಕ್ರಮಗಳನ್ನು, ಅವರೇ ಕಟ್ಟಿಕೊಂಡಿರುವ ಜೀವನ ಮೌಲ್ಯಗಳನ್ನು ಅರ್ಥಮಾಡಿಕೊಳ್ಳುವ ಸಾವಧಾನವನ್ನವರು ತೋರುವುದಿಲ್ಲ. ತಾವು ಕಟ್ಟಿಕೊಂಡಿರುವ ಸಂಸ್ಕೃತಿಯ ಕನ್ನಡಕವನ್ನು ಹಾಕಿಕೊಂಡೇ ಆ ಜನಾಂಗದ ಮೌಲ್ಯಗಳನ್ನು ಲೇವಡಿ ಮಾಡುತ್ತಾರೆ. ಕನಿಕರಿಸುತ್ತಾರೆ, ಸರಿತಪ್ಪುಗಳನ್ನು ನಿರ್ಧರಿಸಿಬಿಡುತ್ತಾರೆ. ಈ ಹರಿಬರಿಯ ದೃಷ್ಟಿಕೋನದ ಅಧ್ಯಯನಕಾರರು, ಚಳುವಳಿಗಾರರು, ಜನಾಂಗದ ಮೌಲ್ಯ ಮತ್ತು ಸಾಮಾಜಿಕ ವ್ಯವಸ್ಥೆಯ ಮಧ್ಯೆ ಬಹುದೊಡ್ಡ ಕಂದಕವನ್ನು ನಿರ್ಮಿಸಿಬಿಡುತ್ತಾರೆ. ಹೀಗಾದಾಗ ವ್ಯವಸ್ಥೆಯ ವಸ್ತುಸ್ಥಿತಿಯನ್ನು ಅರ್ಥಮಾಡಿಕೊಳ್ಳುವುದು ಮರೀಚಿಕೆಯಾಗಿಯೇ ಉಳಿಯುತ್ತದೆ. ನಮ್ಮವರು ಈ ಸುಧಾರಣಾವಾದಿ ಪರಿಕಲ್ಪನೆಯನ್ನು ಸಾಮ್ರಾಜ್ಯಶಾಹಿ ವ್ಯವಸ್ಥೆಯಿಂದಲೇ ಪಡೆದುಕೊಂಡಿದ್ದಾರೆ. ಬ್ರಿಟೀಷರು ನಮ್ಮನ್ನು ಉದ್ದರಿಸುವಂತೆಯೇ ನಡೆದುಕೊಂಡರು. ಇವತ್ತಿನ ಅಧ್ಯಯನಕಾರರು, ಸುಧಾರಣಾವಾದಿಗಳು ಇದಕ್ಕಿಂತ ಭಿನ್ನವೆನ್ನಿಸುವುದಿಲ್ಲ.

ಧರ್ಮಕೇಂದ್ರಿತ ಲೈಂಗಿಕ ದಾಸಿಯರಲ್ಲಿ ಪ್ರಧಾನವಾಗಿ ಎರಡು ಕವಲುಗಳು ಕಾಣಿಸಿಕೊಳ್ಳುತ್ತವೆ. ರಂಭಾ ಪರಂಪರೆ, ರೇಣುಕೆ ಪರಂಪರೆ. ಇದರಲ್ಲಿಯೇ ಮತ್ತೊಂದು ಹನುಮ ಪರಂಪರೆಯನ್ನು ಗುರುತಿಸಬಹುದು. ರಂಭಾ ಪರಂಪರೆಗೆ ಸೇರಿದವರು ದೇವಾಲಯದ ಲೈಂಗಿಕದಾಸಿಯರಾದರೆ, ರೇಣುಕೆ ಮತ್ತು ಹನುಮ ಪರಂಪರೆಗೆ ಸೇರಿದವರು ದೇವರ ಲೈಂಗಿಕದಾಸಿಯರು. ಮೊದಲನೆಯ ವರ್ಗಕ್ಕೆ ಸೇರಿದವರು ಪಾತರದವರಾದರೆ, ಎರಡನೆಯ ವರ್ಗಕ್ಕೆ ಸೇರಿದವರು ದೇವಸ್ತ್ರೀಯರಾಗುತ್ತಾರೆ. ರೇಣುಕೆ ಹಾಗೂ ಹನುಮ ಪರಂಪರೆಗೆ ಸೇರಿದವರಲ್ಲಿ ಸಂಪ್ರದಾಯ ಆಚರಣೆಗಳು ಭಿನ್ನವಾದರೂ ಅವರಿಬ್ಬರಿಗೆ ಲೈಂಗಿಕ ಸೇವೆ ಧರ್ಮ ಪ್ರಧಾನವಾದುದಾಗಿದೆ. ಈ ಅಂಶವನ್ನು ಗಮನಿಸಿಯೇ ಅವರನ್ನು ಒಟ್ಟಂದದಲ್ಲಿ ದೇವಸ್ತ್ರೀಯರು ಎಂದು ಗುರುತಿಸಿದೆ.

ರೇಣುಕೆ ಸಂಪ್ರದಾಯದ ಜಲಪರಂಪರೆಗೆ ಸೇರಿದರೆ, ಹನುಮ ಸಂಪ್ರದಾಯ ಅಗ್ನಿ ಪರಂಪರೆಗೆ ಸೇರಿದೆ. ಸವದತ್ತಿ ಎಲ್ಲಮ್ಮ, ಕೊಕಟನೂರು ಎಲ್ಲಮ್ಮ ಚಿಂಚಲಿ ಮಾಯವ್ವ, ಉಚ್ಚಂಗಿದುರ್ಗದ ಉಚ್ಚಂಗೆವ್ವ, ಹುಲಗಿಯ ಹುಲಿಗೆವ್ವ ಈ ಎಲ್ಲ ದೇವತೆಗಳ ದೇವಸ್ಥಾನಗಳ ಪಕ್ಕದಲ್ಲಿ ನದಿ ಇಲ್ಲವೆ ಹಳ್ಳಗಳು ಹರಿಯುತ್ತಿವೆ. ಇವೆರಡೂ ಇಲ್ಲವಾದಲ್ಲಿ ಕೊಳ್ಳಗಳಾದರೂ ಇರಲೇಬೇಕು. ಜಲಸಂಸ್ಕೃತಿ, ಮಾತೃಮೂಲ ಪರಂಪರೆಗೆ ಸೇರಿದೆ. ಅದಕ್ಕಾಗಿ ರೇಣುಕಾ ಪರಂಪರೆಗೆ ಸೇರಿದವರು ಮಾತೃಮೂಲ ಸಂಸ್ಕೃತಿಯ ಪಳೆಯುಳಿಕೆಗಳು. ಮುತ್ತು ಕಟ್ಟಿಸಿಕೊಳ್ಳುವ ಇವರು ಪುರುಷ ಸ್ಪರ್ಶಕ್ಕೆ ಒಳಗಾದ ತಾಳಿ ಮತ್ತು ಕರಿಮಣಿಯನ್ನು ಹಾಕಿಕೊಳ್ಳುವುದಿಲ್ಲ. ಇತ್ತೀಚಿನ ಜೋಗತಿಯರು ಮುತ್ತಿನ ಜೊತೆ ತಾಳಿಯನ್ನು ಕಟ್ಟಿಕೊಳ್ಳುತ್ತಾರೆ. ಆದರೆ ಅದು ಮೂಲದಲ್ಲಿ ಹಾಗಿರಲಿಲ್ಲ.

ಹನುಮನಿಂದ ಮಾಧ್ವಸಂಪ್ರದಾಯ ಪ್ರಾರಂಭವಾಗುತ್ತದೆ. ಹನುಮ ಅವತಾರವೇ ಭೀಮ, ಭೀಮನ ನಂತರ ಬರುವವನೇ ಮಾಧ್ವ. ತಮಿಳುನಾಡಿನ ಶ್ರೀರಂಗದಲ್ಲಿದ್ದ ರಾಮಾನುಜಾಚಾರ್ಯರು ತಿರುಪತಿಗೆ ಹೆಚ್ಚಿನ ಪ್ರಚಾರವನ್ನು ನೀಡಿದರು. ಚೋಳ, ಹೊಯ್ಸಳರ ಅವಧಿಯ ನಂತರ ವಿಜಯನಗರ ಆಳ್ವಿಕೆ ಬರುತ್ತದೆ. ಹೊಯ್ಸಳರ ಅವಧಿಯಲ್ಲಿ

ರಾಮಾನುಜಾಚಾರ್ಯರು ಕರ್ನಾಟಕದ ಮೇಲುಕೋಟೆಗೆ ಬರುತ್ತಾರೆ. ವಿಜಯನಗರ ಪರಂಪರೆಯಲ್ಲಿ ಮೊದಲು ಶೈವ ಅರಸರಿದ್ದರು. ಸಾಳ್ವನರಸಿಂಗನಿಂದಲೇ ವೈಷ್ಣವರ ಆಳ್ವಿಕೆ ಪ್ರಾರಂಭವಾಯಿತು. ಕೃಷ್ಣದೇವರಾಯನ ಅವಧಿಯಲ್ಲಿ ವ್ಯಾಸರಾಯರು ಬಂದರು. ವ್ಯಾಸರಾಯರು ಆಂಜನೇಯನಿಗೆ ಹೆಚ್ಚು ಮಹತ್ವವನ್ನು ಕೊಟ್ಟರು. ಇದರಿಂದಾಗಿ ಕೃಷ್ಣದೇವರಾಯರು ತಿರುಪತಿ ಪ್ರಭಾವಕ್ಕೆ ಒಳಗಾದಂತೆ ಆಂಜನೇಯನ ಪ್ರಭಾವಕ್ಕೂ ಒಳಗಾದರು. ವ್ಯಾಸರಾಯರು ಸ್ಥಾಪಿಸಿದ ಆಂಜನೇಯ ಮೂರ್ತಿಗಳು ವಿಶಿಷ್ಟವಾಗಿವೆ. ಕರ್ನಾಟಕದಲ್ಲಿ ಹತ್ತನೆಯ ಶತಮಾನದ ಅವಧಿಯಲ್ಲಿಯೇ ಕಂಬದಲ್ಲಿ ಕೆತ್ತಿದ ಆಂಜನೆಯ ಚಿತ್ರಗಳಿದ್ದರೂ, ಅದಕ್ಕೆ ಒಂದು ಸ್ವತಂತ್ರ ಅಸ್ತಿತ್ವ ಬಂದುದು ಕೃಷ್ಣದೇವರಾಯನ ಅವಧಿಯಲ್ಲಿಯೆ (1500). ಸುಮಾರು ಏಳುನೂರಕ್ಕೂ ಹೆಚ್ಚು ಆಂಜನೆಯ ದೇವಸ್ಥಾನಗಳನ್ನು ಅವನು ಕಟ್ಟಿಸಿದನೆಂಬ ಪ್ರತೀತಿಯಿದೆ. ಈ ಎಲ್ಲಾ ದೇವಾಲಯಗಳಿಗೆ ಬಸವಿ ಬಿಡುವ ಸಂಪ್ರದಾಯ ಪ್ರಾರಂಭವಾಯಿತು. ಹನುಮ ಪರಂಪರೆಗೆ ಸೇರಿದ ಬಸವಿಯರಿಗೆ ಮುದ್ರೆ ಹಾಕಲಾಗುತ್ತದೆ. ಆದರೆ ಮಾಧ್ವ ಮಹಿಳೆಯರಿಗೆ ಹಾಕಿದಂತಲ್ಲ. ಬಸವಿಯರಿಗೆ ಎದೆಯ ಮೇಲ್ಭಾಗಗಳಿಗೆ ಹಾಕುತ್ತಾರೆ. ಮುದ್ರೆಯ ಅಗ್ನಿ ಸ್ಪರ್ಶದಿಂದ ಪವಿತ್ರರಾಗುವರೆಂಬ ನಂಬಿಕೆ ಅವರಲ್ಲಿ ಇದೆ. 'ಮುದ್ರೆ ಹಾಕದನ್ನಕ ಅದು ಬಸವನನ್ನಪ್ಪದು' ಎನ್ನುವ ವಚನವನ್ನು ಗಮನಿಸಬೇಕು.[3] ಮುದ್ರೆ ಹಾಕಿದ ಎತ್ತು ಬಸವನಾದರೆ, ಮುದ್ರೆ ಹಾಕಿಸಿಕೊಂಡ ಮಹಿಳೆ ಬಸವಿಯಾಗುತ್ತಾಳೆ. 'ಬಸವಿ' ಈ ಪದವೇ ಶೈವಪಂಥಕ್ಕೆ ಸೇರಿದಂತೆ ಕಂಡರೂ, ಅದರ ಆಚರಣೆಯೆಲ್ಲವೂ ವೈದಿಕ ಪರಂಪರೆಗೆ ಸೇರಿದುದು ಕುತೂಹಲವನ್ನುಂಟು ಮಾಡುತ್ತದೆ. ಅಗ್ನಿ, ವೈದಿಕರಿಗೆ ಶ್ರೇಷ್ಠವಾದುದಾಗಿದೆ. ಅದು ಪಿತೃಮೂಲ ಪರಂಪರೆಗೆ ಸೇರಿದೆ. ಧರ್ಮದ ಪ್ರಚಾರದ ಉದ್ದೇಶ ಮತ್ತು ಪುರುಷಶಾಹಿ ಸಂಸ್ಕೃತಿ ಸ್ವಾರ್ಥತೆಗಳೆರಡೂ ಬಸವಿ ಸಂಪ್ರದಾಯದಲ್ಲಿದೆ.

ವಿಜಯನಗರ ಕಾಲದಲ್ಲಿ ಬಸವಿ ಸಂಪ್ರದಾಯ ಹುಟ್ಟಿಕೊಂಡಿರಬೇಕು. ಇದು ಊಳಿಗಮಾನ್ಯದ ಪಳೆಯುಳಿಕೆ. ವಿಜಯನಗರ ಸಾಮ್ರಾಜ್ಯ ರೂಪಿಸಿದ ವ್ಯವಸ್ಥೆಯಾದರೂ ಅದಕ್ಕೆ ಧಾರ್ಮಿಕ ಸ್ವರೂಪವಿದೆ. ಬಹುಸಂಖ್ಯೆಯಲ್ಲಿ ಹನುಮಂತದೇವರ ದೇವಾಲಯಗಳನ್ನು ಕಟ್ಟಿಸಿ ಅದಕ್ಕೆ ಹೆಣ್ಣುಬಿಡುವ ಪದ್ಧತಿಗೆ ಅಡಿಗಲ್ಲು ಹಾಕಿದರು. ವಿಜಯನಗರ ಕಾಲದಲ್ಲಿ ದೇವಸ್ತ್ರೀಯರು ಹೇರಳವಾಗಿದ್ದಷ್ಟು ಇನ್ನಾವ ಸಾಮ್ರಾಜ್ಯಗಳ ಕಾಲವಧಿಗಳಲ್ಲಿ ಇರಲಿಲ್ಲ. ಇದಕ್ಕೆ ಅನೇಕ ಕಾರಣಗಳು ಸಿಗುತ್ತದೆ. ಮುಖ್ಯವಾಗಿ ವಾಣಿಜ್ಯಕೇಂದ್ರವಾಗಿ ಬೆಳೆದ ಇದು ದೇಶ-ವಿದೇಶಗಳಿಂದ ಬಂದ ಸಾವಿರಾರು ವ್ಯಾಪಾರಸ್ಥರಿಗೆ ಆಶ್ರಯ ನೀಡಿತ್ತು. ಅವರು ಹಲವು ತಿಂಗಳುಗಳೋ ಇಲ್ಲವೆ ವರ್ಷಗಳೋ ಅಲ್ಲಿದ್ದು ವ್ಯಾಪಾರವನ್ನು ನಡೆಸುತ್ತಿದ್ದರು. ಈಗಿನಂತೆ ಆಗ, ಬೇಕೆಂದಲ್ಲಿಗೆ ಹೋಗಲು ಆಧುನಿಕ ವಾಹನಗಳಿರಲಿಲ್ಲ. ಹೀಗಾಗಿ ಅಷ್ಟು ದೀರ್ಘ ಅವಧಿಯವರೆಗೆ ಅವರು ತಮ್ಮ ಹೆಂಡತಿಯರನ್ನು ಬಿಟ್ಟಿರಬೇಕಾದ ಅನಿವಾರ್ಯತೆ ಇತ್ತು. ಈ ಸಂದರ್ಭದಲ್ಲಿ ಅವರು ಹೆಣ್ಣಿನ ಸಂಗವನ್ನು ಅಪೇಕ್ಷಿಸುತ್ತಿದ್ದರು. ಕುಟುಂಬಸ್ಥ ಮಹಿಳೆಯರನ್ನು ಬಯಸುವುದಾಗಲೀ, ಮುಟ್ಟುವುದಾಗಲೀ ಈ ಎರಡನ್ನೂ ಸಾಮಾಜಿಕ ಅಪರಾಧಗಳೆಂದೇ ಪರಿಗಣಿಸಲಾಗಿದೆ. ಅದಕ್ಕಾಗಿಯೇ ವಿಜಯನಗರ ಸಾಮ್ರಾಜ್ಯವು ದೇವಾಲಯಗಳಿಗೆ ಹೆಣ್ಣುಗಳನ್ನು ಬಿಡುವ ಸಂಪ್ರದಾಯಕ್ಕೆ ವಿಶೇಷ ಪ್ರಾಧ್ಯಾನತೆ ನೀಡಿ ಪ್ರೋತ್ಸಾಹಿಸಿತು. ಏಕಕಾಲದಲ್ಲಿ ಎರಡು ಸಂಗತಿಗಳು ಕಾರ್ಯಗತಗೊಂಡವು 1. ಧರ್ಮ ಪ್ರಚಾರ, 2. ಅಂದಿನ ಸಾಮಾಜಿಕ ಅಗತ್ಯದ ಪೂರೈಕೆ. ವಿಜಯನಗರ ಸಾಮ್ರಾಜ್ಯದಲ್ಲಿದ್ದ ಅಚ್ಯುತರಾಯ ಪೇಟೆಯನ್ನು 'ಸೂಳೆ ಬಜಾರು' ಎಂದೇ ಗುರುತಿಸುತ್ತಾರೆ. ಅಚ್ಯುತರಾಯ ಬಜಾರದ ಬಲಭಾಗದಲ್ಲಿ ಮೂರ್ತಿ ಇಲ್ಲದ ದೇವಾಲಯವಿದೆ. ದೊರೆತ ಶಾಸನದ ಉಲ್ಲೇಖದ ಪ್ರಕಾರ ಅಲ್ಲಿ ಆಂಜನೇಯ ದೇವಸ್ಥಾನವಿತ್ತು. ಅದು ವೈಷ್ಣವ ಪಂಥದ ಶಿಲ್ಪವನ್ನು ಒಳಗೊಂಡಿದೆ. ವಿಜಯನಗರಕ್ಕೆ ಭೇಟಿ ನೀಡಿದ ಬಹುಪಾಲು ವಿದೇಶಿ ಪ್ರವಾಸಿಗರು ಅಲ್ಲಿರುವ ದೇವಸ್ತ್ರೀಯರ ಕುರಿತಂತೆ ಉಲ್ಲೇಖಿಸುತ್ತಾರೆ. ಹನುಮಂತದೇವರ ದೇವಾಲಯಕ್ಕೆ 'ಬಸವಿ' ಬಿಡುವ ಸಂಪ್ರದಾಯಕ್ಕೆ ಸಾಂಸ್ಕೃತಿಕ ಚಹರೆಗಿಂತಲೂ ವ್ಯವಹಾರಿಕ ಚಹರೆ ಇದೆ. ಅದಕ್ಕೆ ಜೋಗತಿ ಸಂಪ್ರದಾಯಕ್ಕಿರುವ ಪ್ರಬಲವಾದ ಪೌರಾಣಿಕ ಹಿನ್ನೆಲೆಯಿಲ್ಲ.

ಹೆಣ್ಣು ಮಕ್ಕಳನ್ನು ದೇವರ ಹೆಸರಿನಲ್ಲಿ ಬಿಡುವುದಕ್ಕೆ ಹೋರಿ ಹೊರಿಸುವುದು, ಮನೆಗೆ ಬಿಡುವುದು, ದೇವರಿಗೆ ಬಿಡುವುದು, ದೇವರ ಹೊರಿಸುವುದು, ದೇವ ಬಿರುದಾವಳಿ ಹೊರುವುದು ಮೊದಲಾಗಿ ಹೇಳುವರು.

ಮ್ಯಾಸನಾಯಕರು, ಊರನಾಯಕರು, ಗಂಗಮತದವರು, ಹರಿಜನರು, ತಳವಾರರು ಈ ಜನಾಂಗಗಳಷ್ಟೇ ಮನೆಯ ಹೆಣ್ಣುಮಕ್ಕಳನ್ನು ದೇವರಿಗೆ ಬಿಡುವ ಸಂಪ್ರದಾಯವಿದೆ. ಹೆಚ್ಚಾಗಿ ನಾಯಕ ಹೆಣ್ಣು ಮಕ್ಕಳನ್ನು ದೇವಸ್ತ್ರೀಯಾಗಿಸುವ ಸಂಪ್ರದಾಯ ಬಳ್ಳಾರಿ ಜಿಲ್ಲೆಯಲ್ಲಿದ್ದಷ್ಟು ಪ್ರಬಲವಾಗಿ ಉತ್ತರ ಕರ್ನಾಟಕದ ಉಳಿದ ಜಿಲ್ಲೆಗಳಲ್ಲಿ ಇಲ್ಲ. ಮರಾಠ ಮಹಿಳೆಯರನ್ನು ದೇವಸ್ತ್ರೀಯರನ್ನಾಗಿಸುವ ಆಚರಣೆ ಚಿಂಚಲಿ, ಎಡೂರ ಮೊದಲಾದ ಭಾಗಗಳಲ್ಲಿದೆ. ಇವನ್ನು ಹೊರತುಪಡಿಸಿದರೆ ಬೇರೆಲ್ಲಿಯೂ ಮರಾಠ ಮಹಿಳೆಯರು ದೇವಸ್ತ್ರೀಯಾಗಿರುವ ಉದಾಹರಣೆ ಸಿಕ್ಕುವುದು ಬಹಳ ವಿರಳ. ವಿಜಾಪೂರ, ಬೆಳಗಾಂವ, ಧಾರವಾಡ, ಬಳ್ಳಾರಿ, ದಾವಣಗೆರೆ ಈ ಎಲ್ಲ ಜಿಲ್ಲೆಗಳಲ್ಲಿ ಹರಿಜನ, ಗಂಗಮತ, ತಳವಾರ ಈ ಸಂಪ್ರದಾಯಕ್ಕೊಳಪಡುವುದು ಸಾಮಾನ್ಯವಾಗಿದೆ.

ರೇಣುಕೆ ಪರಂಪರೆಗೆ ಸೇರಿದವಳು ಮುತ್ತು ಕಟ್ಟಿಸಿಕೊಂಡರೆ, ಹನುಮ ಪರಂಪರೆಗೆ ಸೇರಿದವಳು ಮುದ್ರೆ ಹಾಕಿಸಿಕೊಳ್ಳುವಳು. ಗಟ್ಟಿಮುದ್ರೆ ಹಾಕಿಸಿಕೊಂಡವರನ್ನು 'ಮೂರು ಮುದ್ರೆ ಸೂಳೇರು' ಎಂದು ಕರೆಯುವ ವಾಡಿಕೆ ಜನಸಾಮಾನ್ಯರಲ್ಲಿತ್ತು. ವಿಜಾಪುರ, ಬೆಳಗಾಂ, ಧಾರವಾಡ ಜಿಲ್ಲೆಗೆ ಸೇರಿದವರು ಹೆಚ್ಚಾಗಿ ಮುತ್ತು

ಕಟ್ಟಿಸಿಕೊಂಡರೆ, ಬಳ್ಳಾರಿ ಹಾಗೂ ದಾವಣಗೆರೆ ಜಿಲ್ಲೆಗೆ ಸೇರಿದ ಬಹುಪಾಲು ದೇವಸ್ತ್ರೀಯರು ಮುದ್ರೆ ಹಾಕಿಸಿಕೊಳ್ಳುವರು. ಮುದ್ರೆಗಳಲ್ಲಿಯೇ ಎರಡು ವಿಷಯಗಳಿವೆ : 1. ಗಟ್ಟಿಮುದ್ರೆ 2. ಹೂಮುದ್ರೆ. ಗಟ್ಟಿಮುದ್ರೆ ಪರಂಪರೆ ಹೂಮುದ್ರೆಗಿಂತಲೂ ಹೆಚ್ಚು ಪ್ರಾಚೀನವಾದುದಾಗಿರಬೇಕು. ಯಾಕೆಂದರೆ ಉಗ್ರ ಆಚರಣೆಗಳು ನಾಗರೀಕತೆಗೆ ಒಳಗಾದಂತೆಲ್ಲಾ ಸೌಮ್ಯಗೊಳ್ಳುತ್ತಾ ಹೋಗುತ್ತವೆ. ಮತ್ತೊಂದು ಕುತೂಹಲದ ಸಂಗತಿಯೆಂದರೆ ಹೂಮುದ್ರೆ ಹಾಕಿಕೊಳ್ಳುವ ಸಂಪ್ರದಾಯ ಮಾಧ್ವಸಂಪ್ರದಾಯದ ಬ್ರಾಹ್ಮಣರಲ್ಲಿಯೂ ಇದೆ.

ನಾನು ಸಂದರ್ಶಿಸಿದ ಗಟ್ಟಿಮುದ್ರೆ ಹಾಕಿಸಿಕೊಂಡ ಮಹಿಳೆಯರೆಲ್ಲಾ ಅದನ್ನು ವೈಭವೀಕರಿಸಿಯೇ ಹೇಳಿದರು. ಅದರ ಆಳದೊಳಗಿನ ವಿಕಾರತೆ ಕ್ರೂರತೆ ಅವರಿಗರ್ಥವಾಗಿತ್ತೋ ಇಲ್ಲವೋ!, ಕಮಲಾಪುರದ ಲಕ್ಷ್ಮಿ (ಹೆಸರು ಬದಲಾಯಿಸಲಾಗಿದೆ) ಬಹಳ ಸೂಕ್ಷ್ಮವಾಗಿ ಪ್ರತಿಕ್ರಿಯಿಸಿದಳು. 'ಪಂಚಲೋಹದ ಮುದ್ರೆಗಳನ್ನು ನಮಗೆ ಹಾಕಿದರೆ ನಾವು ಬಸವಿಯರಾದಂತೆ. ಶಂಖ, ಚಕ್ರ, ಪದ್ಮ ಹೀಗೆ ಮೂರು ಮುದ್ರೆಗಳಿರುತ್ತವೆ. ಮುದ್ರೆಗಳನ್ನು ಹರೆಯದ ಹುಡುಗಿಗೆ ಮಾತ್ರ ಹಾಕುವರು. ನನಗಾಗ ಹದಿನಾರು ವರ್ಷ ವಯಸ್ಸು. ವಯಸ್ಸಿಗನುಗುಣವಾಗಿ ನನ್ನಲ್ಲಿ ದೈಹಿಕ ಬದಲಾವಣೆಗಳಾಗಿದ್ದವು. ಏಕಾಏಕಿ ಮನೆಯಲ್ಲಿ ನನ್ನನ್ನು ಬಸವಿ ಬಿಡುವ ಯೋಜನೆಯನ್ನು ಹಾಕಿಕೊಂಡರು. ಒಂದು ಮುಹೂರ್ತವನ್ನು ನಿಗದಿಪಡಿಸಿ ತಲೆ ಸ್ನಾನ ಮಾಡಿಸಿ ಹನುಮಂತ ದೇವರ ದೇವಸ್ಥಾನಕ್ಕೆ ಕರೆದುಕೊಂಡು ಹೋದರು. ಆ ಗುಡಿಯ ಪೂಜಾರಿ ನಮ್ಮ ಜಾತಿಯವನೇ (ನಾಯಕ). ಮಡಿ ಸೀರೆಯನ್ನು ಉಡಿಸಿದ ನನಗೆ ಎಲೆ ಅಡಿಕೆಯನ್ನಿಟ್ಟು ಏನೇನೋ ಶಾಸ್ತ್ರಗಳನ್ನು ಮಾಡಿದರು. ದೇವರೆದುರಾಗಿ ನನ್ನನ್ನು ಕೂಡಿಸಿದ್ದರು. ನನಗೆ ಎದುರಾಗಿ ಪೂಜಾರಿ ಕುಳಿತಿದ್ದನು. ಮುದ್ರೆ ಹಾಕಲು ಮೈಮೇಲಿನ ಜಂಪರಿನ ಗುಂಡಿಗಳನ್ನು ಬಿಚ್ಚಲು ಹೇಳಿದರು. ನಾನು ಹೌಹಾರಿದೆ. ಭೂಮಿ ತಾಯಿ ನನ್ನನ್ನೇಕೆ ನುಂಗಿ ಪುಣ್ಯ ಕಟ್ಟಿಕೊಳ್ಳುತ್ತಿಲ್ಲ ಎನಿಸಿತು. ಅಪಮಾನದಿಂದ ಕುಗ್ಗಿ ಹೋದ ನನ್ನ ದೊಡ್ಡ ದೇಹ ಹಿಡಿಯಷ್ಟಾಗಿತ್ತು. ನನ್ನ ಕಣ್ಣೀರಿಗೇನಾದರು ಶಕ್ತಿ ಬಂದಿದ್ದರೆ ನಮ್ಮವ್ವ, ಅಪ್ಪ, ಪೂಜಾರಿ, ಅದಕ್ಕೆ ಕಾರಣವಾದ ಈ ಸಮಾಜ ಎಲ್ಲವೂ ಹೇಳಹೆಸರಿಲ್ಲದಂತೆ ಕೊಚ್ಚಿ ಹೋಗಬೇಕಾಗಿತ್ತು. ಹೆತ್ತ ತಾಯಿಯಿಂದಲೂ ಬಚ್ಚಿಟ್ಟುಕೊಂಡ ನನ್ನ ದೇಹ ಅಂದು ದೇವಾಲಯದಲ್ಲಿ ಸಾರ್ವಜನಿಕವಾಗಿ ಬೆತ್ತಲುಗೊಂಡಿತ್ತು. ನಮ್ಮ ಮುಂದಿನ ಬದುಕಿಗೆ ಇದು ರಂಗತಾಲೀಮಾಗಿರಬೇಕು. ಪೂಜಾರಿಯನ್ನೊಳಗೊಂಡಂತೆ ಅಲ್ಲಿದ್ದವರ ಮುಖವೆಲ್ಲ ಚಕ್ಕನೇ ವಿದ್ಯುದ್ದೀಪದಂತೆ ಹತ್ತಿಕೊಂಡವು. ಎದುರುಗಡೆ ಕೆಂಡದಲ್ಲಿ ಕಾದು ಕೆಂಡದಂತೆಯೇ ನಿಗಿನಿಗಿಸುತ್ತಿದ್ದ ಮುದ್ರೆಗಳಿದ್ದವು. ಅದನ್ನು ನೋಡಿ ಮುಂದಿನದನ್ನು ನೆನಪಿಸಿಕೊಂಡೆ ತೊಡೆ ಸಂದಿಯಲ್ಲಿ ನಡುಕವುಂಟಾಗಿ ಅಲ್ಲಿಯೇ ಸಣ್ಣಗೆ ಉಚ್ಚೆಹೋಯಿತು. ಅದನ್ನು ಹೇಳುವ ಸ್ಥಿತಿಯಲ್ಲಿ ನಾನು ಇರಲಿಲ್ಲ. ಕೇಳುವ ಸ್ಥಿತಿಯಲ್ಲಿ ಅವರು ಇರಲಿಲ್ಲ. ವೀಳ್ಯದೆಲೆಯನ್ನು ಎದೆಯ ಮೇಲ್ಭಾಗದ ಎರಡೂ ಬದಿಗೆ ಇಟ್ಟು ಅವುಗಳ ಮೇಲೆ ಮುದ್ರೆಗಳನ್ನು ಒತ್ತಿದರು. ಎಡಭಾಗಕ್ಕೆ ಶಂಖ, ಬಲಭಾಗಕ್ಕೆ ಚಕ್ರ ಇತ್ತು. ಅದೇ ಕ್ಷಣದಲ್ಲಿಯೇ ಬಲಗೈ ತೋಳ ಮೇಲೆ ಪದ್ಮವನ್ನು ಹಾಕಿದರು. ಅಪಮಾನ ಹಾಗೂ ನೋವುಗಳನ್ನು ತಾಳಿಕೊಳ್ಳಲಾರದ ನಾನು ಯಮನ ಮನೆಗೆ ಮುಟ್ಟುವಂತೆ ಚೀರಿದೆನು. ನನ್ನ ತಾಯಿ ಗಾಭರಿಗೊಂಡಳು. ಪೂಜಾರಿ ತಕ್ಷಣ ನನ್ನ ಬಾಯಲ್ಲಿ ಬಾಳೆಹಣ್ಣನ್ನು ಇಟ್ಟನು. ಸಾವು ನೋವಿನ ಸಂಕಟದಲ್ಲಿ ಅದನ್ನು ಕಚ್ಚಿ ಬಿಸಾಕಿದೆ. ನನ್ನವ್ವ ಏನೋ ಅಘಟಿತ ಘಟನೆ ಸಂಭವಿಸಿದಂತೆ ಎದೆ ಎದೆ ಹೊಡೆದುಕೊಂಡು ಅಳಲು ಪ್ರಾರಂಭಿಸಿದಳು. ಮುದ್ರೆ ಹಾಕಿಸಿಕೊಳ್ಳುವಾಗ ಹಾಗೂ ಗಾಯ ಮಾಯುವವರೆಗೂ ನೋವು ಎಂದು ನರಳಬಾರದಂತೆ. ಚಾರಿತ್ರಹೀನರಿಗೆ ಮಾತ್ರ ನೋವಾಗುವುದಂತೆ, ಗಾಯಕ್ಕೆ ಹುಳುಬೀಳುವುದಂತೆ. ಈ ನಂಬಿಕೆ ಪ್ರಚಲಿತದಲ್ಲಿದ್ದುದರಿಂದಲೇ ಗಟ್ಟಿಮುದ್ರೆ ಹಾಕಿಸಿಕೊಂಡವರಾರೂ ನೋವಾಗಿದೆ ಎಂದು ಹೇಳುವುದಿಲ್ಲ. ಅದು ಹ್ಯಾಂಗ ನೋವಾಗುವುದಿಲ್ಲ ನೀವೇ ವಿಚಾರಿಸಿ, ಒಂದು ಸಣ್ಣ ಇರುವಿ ಕಡದ್ರ ಅವ್ವಾ ಅಂತ ಚೀರತೀವಿ. ಕಾಸಿ ಬೆಂಕಿ ಇಟ್ಟ ನೋವಾಗಂಗಿಲ್ಲೇನು? ಮುದ್ರಿ ಹಾಕಿದ ಮೇಲೆ ಹನುಮದಾಳಿ ಕಟ್ಟಿದರು. ತಾಳಿ ಮೇಲೆ ಹನುಮಂತನ ಮುದ್ರೆ ಇರುತ್ತದೆ. ನಮ್ಮದು ಒಂಟಿ ತಾಳಿ. ಗಂಡುಳ್ಳವರಂಗ ಎರಡು ತಾಳಿ ಇರುವುದಿಲ್ಲ. ಇಷ್ಟು ಹೇಳಿದ ಅವಳ ಗಂಟಲು ನರಗಳು ಉಬ್ಬಿನಿಂತಿದ್ದವು. ಕಣ್ಣುಗಳು ತೇವವಾಗಿದ್ದವು. ಅವಳ ದುಃಖದ ಆಳ ನನಗೆ ನಿಲುಕಿತು. ಬಾಯಲ್ಲಿ ಸೆರಗನ್ನು ಉಂಡೆಯಾಗಿಸಿಕೊಂಡು ಅವಳು ಒಳಗಿನ ರೂಮಿನೊಳಗೆ ಓಡಿಹೋದಳು. ಅವಳನ್ನು ಮರಳಿ ಕರೆದು ಸಂತೈಸುವ ಚೈತನ್ಯ ನನ್ನಲ್ಲಿ ಉಡುಗಿ ಹೋಗಿತ್ತು.

ಮರಿಯಮ್ಮನ ಹಳ್ಳಿಯಲ್ಲಿಯ ಭೀಮವ್ವ ಹೂಮುದ್ರೆ ಹಾಕಿಸಿಕೊಂಡವಳು. ಅದನ್ನು ಅವಳು ಬೇಸರದಿಂದಲೇ ನೆನಪಿಸಿಕೊಂಡಳು. ''ನನಗೆ ಹೂಮುದ್ರೆ ಹಾಕಿದಾಗ ಹದಿನೈದು-ಹದಿನಾರು ವರ್ಷ ವಯಸ್ಸಾಗಿತ್ತು. ಗಟ್ಟಿ ಮುದ್ರಿ ಹಾಕಿಸಿಕೊಂಡ್ರ ಬಾಳ ನೇಮ ನಿತ್ಯದಿಂದ ನಡಕೋಬೇಕಾಗತೈತಿ. ಮೊದಲಿನಿಂದ ಚರಿತ್ರೆಯನ್ನು ಸುದ್ದ ಇಟಕೋಬೇಕಾಗತೈತಿ. ಅದೆಲ್ಲ ಕಷ್ಟ, ನಾನು ಹನುಮದೇವರ ಬಿರುದಾವಳಿ ಹೊತ್ತಕೊಂಡೇನಿ. ಅವತ್ತ ಹನುಮಂತ ದೇವರ ಗುಡಿಗೆ ಕರಕೊಂಡ ಹೋದ್ರು. ನನಗ ಹೊಸಾ ಬಟ್ಟಿ ಉಡಿಸಿದ್ರು. ಪೂಜಾರೆಪ್ಪ ಬಂದು ಅದೇನೇನೂ ಎಲಿ ಶಾಸ್ತ್ರ ಮಾಡಿದಾ. ಅವ್ಮ್ಯಾಲಿ ಎದಿಭಾಗವನ್ನು ಬೆತ್ತಲು ಮಾಡಬೇಕಂತ ಹೇಳಿದರು. ನನ್ನ ಜೀವ ಬಾಯಾಗ ಬಂದ್ಹಂಗ ಆಯ್ತು. ಆದ್ರೂ ತಗೀದ್ಕ ಬ್ಯಾರೆ ದಾರಿ ಇರ್ಲಿಲ್ಲ. ಎರ್ಡು ಮಲ್ಲಿಗಿ ಹೂವ್ನ ದೇವರ ಮುಂದ್ಲ ದೀಪಕ್ಕೆ ಹಿಡ್ದು ಒಮ್ಮಾಕ ಎರ್ಡೂ ಎದೆ ಮ್ಯಾಗ ಒತ್ತಿದಾ. ಹೀಂಗ ಆದ್ರ ಹೂ ಮುದ್ರಿ ಹಾಕಿದ್ಹಾಂಗ. ಅದಾದಮ್ಯಾಳಿ ಹನುಮದಾಳಿ ಕಟ್ಟಿದಾ. ಇಷ್ಟಾದ್ರ ನಾವು ಬಸವೇರು ಅದ್ಹಂಗ'' ಎಂದು ಹೇಳಿ ಎದುರಿಗಿನ ಗೋಡೆಯನ್ನು ದಿಟ್ಟಿಸುತ್ತ ಕುಳಿತಳು. ಅವರವರ ಮನೆತನದ ಸಂಪ್ರದಾಯಕ್ಕನುಗುಣವಾಗಿ ಕೆಲವು ಮುದ್ರೆ ಹಾಕಿಸಿಕೊಂಡರೆ, ಮತ್ತೆ ಹಲವರು ಮುತ್ತು

ಕಟ್ಟಿಸಿಕೊಳ್ಳುತ್ತಾರೆ. ಇಂಥ ಜಾತಿಯವರೇ ಮುದ್ರೆ ಹಾಕಿಸಿಕೊಳ್ಳಬೇಕು, ಇಂಥ ಕುಲದವರೇ ಮುತ್ತು ಕಟ್ಟಿಸಿಕೊಳ್ಳಬೇಕೆಂಬ ನಿರ್ಬಂಧವೇನಿಲ್ಲ. ಪುರುಷನ ಲೈಂಗಿಕ ಸ್ವೇಚ್ಛಾಚಾರದ ಅಧಿಕಾರಕ್ಕೆ ಈ ಮುದ್ರೆಗಳು ಜೀವಂತ ಸಾಕ್ಷಿಗಳು. ಜೀತದಾಳಿನ ಕಾಲುಗಳಿಗೂ ಮುದ್ರೆ ಹಾಕುತ್ತಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಈಗ ಕೂಡ ಇದೆ. ಮೇಲ್ವರ್ಗದಲ್ಲಿ ಸ್ವಾರ್ಥಕ್ಕೆ ಮುದ್ರೆಯೊತ್ತಿಸಿಕೊಂಡ ಗಂಡು ಜೀತದಾಳು ವರ್ಗ, ಜಾತಿ ನೆಲೆಯಲ್ಲಿ ಒಂದು ರೀತಿಯ ಶೋಷಣೆಗೆ ಒಳಪಟ್ಟರೆ, ಮುದ್ರೆಯೊತ್ತಿಸಿಕೊಂಡ ಈ ಬಗೆಯ ಲೈಂಗಿಕದಾಸಿಯರು ಜಾತಿ, ವರ್ಗ ಹಾಗೂ ಲಿಂಗ ಕಾರಣದಿಂದಾಗಿ ಅವರಿಗಿಂತ ಭೀಕರ ಶೋಷಣೆಗೆ ಒಳಪಟ್ಟರು.

ರೇಣುಕೆ ಸಂಪ್ರದಾಯದಲ್ಲಿ ಮುದ್ರೆ ಹಾಕಿಸಿಕೊಳ್ಳುವುದಿಲ್ಲ. ಅವರ ಮುತ್ತು ಕಟ್ಟಿಸಿಕೊಳ್ಳುವ ಸಾಂಸ್ಕೃತಿಕ ಪ್ರಕ್ರಿಯೆ ಮುದ್ರೆ ಹಾಕಿಸಿಕೊಳ್ಳುವರಿಗಿಂತಲೂ ಭಿನ್ನವಾಗಿದೆ. ಹುನಗುಂದದ ಭೀಮವ್ವ ಎಲ್ಲವನ್ನೂ ಸವಿವರವಾಗಿ ಮಾನಸಿಕ ಸ್ಥಿಮಿತತೆಯನ್ನು ಕಾಪಾಡಿಕೊಂಡು ಹೇಳಿದರು. "ಕರೀ ಕಂಬಳಿ ಹಾಸ್ತಾರ. ಸ್ಯಾಸಕ್ಕಿ ಹೊಯ್ತಾರ ಗಂಡಿನ ಜತೆ ಮದ್ವಿಯಾಗುವರ್ಗಿ ಇಬ್ಬರು ಕುಂಡ್ರುವ್ಹಂಗ ಎರ್ಡ ಚೌಕ ಸ್ಯಾಸಕ್ಕಿ ಹಾಕ್ತಾರ. ಆದ್ರ ನಮಗ ಹಂಗಲ್ಲ. ಒಂದ ಚೌಕಾ ಮಾತ್ರ ಹಾಕ್ತಾರ. ನಮಗ ಸಂವದತ್ತಿಗಿ ಹೋಗಾಕ ಆಗಿಲ್ಲ. ಹೀಂಗಾಗಿ ನಮ್ಮ ಕಾರ್ಯಾ ಮನಿಯಾಗ ಮಾಡಿದ್ರು. ಸೂಳೇರ ಮದ್ವಿಗಿ ಗಂಡುಳ್ಳವರು ಯಾಕ ಬರ್ತಾರ? ಜೋಗತೇರ ಸೇರಿರ್ತಾರ. ಏನಿಲ್ಲಂದ್ರೂ ಐದ ಮಂದಿ ಜೋಗತೇರು ಇರಾಕಬೇಕು. ತೆಲಿಸ್ನಾನಾ ಮಾಡಿಸ್ತಾರ, ಹೊಸಸೀರಿ ಉಡಸ್ತಾರ. ಎರಡ ಕೆಂಪ ಮುತ್ತು, ಮೂರು ಬಿಳಿಮುತ್ತು ದಾರದಾಗ ಹಾಕಿ ಪೋಣಸ್ತಾರ. ಅದು ನಮಗ ತಾಳಿ ಇದ್ಹಂಗ. ಪೂಜಾರಪ್ಪ ಏನೇನೋ ಶಾಸ್ತ್ರಾ ಮಾಡಿಸಿ ಹಿರಿ ಜೋಗತಿ ಕಡಿಯಿಂದ ಮುತ್ತ ಕಟ್ಟಸ್ತಾನ. ನನ್ನ ಕಾರ್ಯಕ ಬಂದ ಪೂಜಾರಿ ಕುರುಬರವನು. ಒಮ್ಮಿ ಮುತ್ತು ಕಟ್ಟಿಸಿಕೊಂಡ ಮ್ಯಾಕ ನಮಗ ಮದ್ವಿ ಆಗಾಕ ಬರಂಗಿಲ್ಲ. ನಮ್ದು ದೇವಿ ಜೊತೆ ಮದ್ವಿ ನಡೆದು ಹೋಗಿರ್ತದ. ನಮ್ಮವ್ವ ಅವ್ನಿಗೆ ದಕ್ಷಿಣಾ, ಉಲ್ಪಿ ಇಟ್ಟುಕೊಟ್ಟಳು. ಮುತ್ತು ಕಟ್ಟಿದ ಮ್ಯಾಕ ಪಡ್ಡಲಗಿ ಕೊಟ್ಟು ನಮ್ಮಿಂದ ಭಾಷಾ ತಗೋಂತಾನ. ಬಾಲಬಾಷಿ ಮಾತನಾಡಬಾರದು. ಯಾರರ ಸತ್ರ, ಕೆಟ್ರ ಉಣಬಾರ್ದು. ಮೆಟ್ಟ ಮುಟ್ಟಬಾರದು. ನಿನ್ನ ಮನಿಗಿ ಯಾರಾದ್ರೂ ಏನಾರ ಕೇಳಕೊಂಡು ಬಂದ್ರೂ ಇಲ್ಲ ಅನ್ನಬಾರ್ದು. ಹೀಂಗ ಬಾಳ್ಸ ನೇಮ ನಿತ್ಯ ಹೇಳ್ತಾರ. ಅವರು ಒಂದೊಂದು ಮಾತಿಗೂ ಭಾಷ್ಯಾ ಇಸಗೋತಾರು. ನಾವು ಆಯ್ತಿರಿ ಅಂತ ಹೇಳಿ ಭಾಷ್ಯಾ ಕೊಡ್ತೇವಿ. ಆಮ್ಯಾಲಿ ಐದವಾರ ಊರಾಡಾಕ ಹೋಗಬೇಕು. ಐದಿನಿ ವಾರ ಮುತ್ತ ಕಟ್ಟಿಸಿದ ದಿವಸದ್ಹಂಗ ಸಿಹಿ ಅಡಗಿ, ಮಾಂಸದಡಿಗಿ ಮಾಡ್ತಾರ. ಒಂದು ತಟ್ಯಾಗ ಮಾಡಿದ ಅಡಿಗೀನು ಬಡಸ್ತಾರ, ಅದು ಮುಖ್ಯ ಎಡಿ. ಅದನ್ನು ಜೋಗತೇರು ಬಿಟ್ರ ಮತ್ಯಾರು ಮುಟ್ಟಂಗಿಲ್ಲ. ಅದನ್ನ ಐದ ಮಂದಿ ಹಿರೆ ಜೋಗತೇರ್ಗಿ ಎಡಿ ಇಡ್ತಾರ. ಅದನ್ನ ಜೋಗತೇರು ಮೊದಲು ಉಂತಾರ. ಆಮ್ಯಾಕ ಅವರ ಜೊತಿ ಅದೇ ತಟ್ಯಾಗ ಮುತ್ತು ಕಟ್ಟಿಸಿಕೊಂಡಾಕಿ ಉಣಬೇಕು. ತಟ್ಟಿ ಸುತ್ತ ನಾವೆಲ್ಲರು ಗುಂಡಕ ಕುಂತು ಊಟ ಮಾಡ್ತೇವಿ. ಅಂದಿಗೆ ನಾನು ಜೋಗತೇರು ಕುಲದಾಗ ಬಿದ್ಹಂಗ. ಇದು ನಮಗ ಮುತ್ತು ಕಟ್ಟಿಸಿಕೊಂಡಷ್ಟು ಮಹತ್ವದ ಕಾರ್ಯ. ಇಷ್ಟೆಲ್ಲ ಆಗೋತನಕ ನಾವು ಯಾವ ಗಂಡಸರನ್ನೂ ಕೂಡಂಗಿಲ್ಲ'. ಈ ಆಚರಣೆಯನ್ನು ಅವಳು ಸಹಜವಾಗಿ ಸ್ವೀಕರಿಸಿದ್ದಳು. ಆದರೆ ಅವಳ ದೃಷ್ಟಿಯಲ್ಲಿ ತಪ್ಪಲ್ಲ. ಅದು ಆಚರಣೆ ಅಷ್ಟೆ.

ಗಂಡನಿದ್ದೂ ಕೆಲವರು ಮುತ್ತು ಕಟ್ಟಿಸಿಕೊಳ್ಳುತ್ತಾರೆ. ಆದರೆ ಅವರು ಜೋಗತಿಯರಲ್ಲ. ಅವರು ಲೌಕಿಕ ಪಂಥಕ್ಕೆ ಸೇರಿದವರಾಗಿರುತ್ತಾರೆ. ಡೇವಿಕಾಟದಿಂದ ಮುತ್ತು ಕಟ್ಟಿಸಿಕೊಳ್ಳುತ್ತಾರೆ. ಅದಕ್ಕೆ ಕಾಟ ಮುತ್ತು ಎನ್ನುತ್ತಾರೆ. ಮತ್ತೆ ಕೆಲವರು ಕುಲ ಪರಂಪರೆಯಿಂದಾಗಿ ಕಟ್ಟಿಸಿಕೊಳ್ಳುವರು. ಅಂತಹ ಮನೆತನಗಳಲ್ಲಿ ದೇವಿ ಮುತ್ತನ್ನು ಹಿರಿ ಸೊಸೆಯಾದವಳು ಕಟ್ಟಿಕೊಳ್ಳಲೇಬೇಕು. ಅದು ಅವರ ಮನೆತನದಲ್ಲಿ ತಲೆತಲಾಂತರದಿಂದ ಬಂದುದಾಗಿರುತ್ತದೆ. ಆದರೆ ಬಸವಿ ಪರಂಪರೆಯಾಗಲಿ, ಜೋಗತಿ ಸಂಪ್ರದಾಯವಾಗಲಿ ತಲೆಮಾರಿನಿಂದ ತಲೆಮಾರಿಗೆ ಬಂದುದಾಗಿರುವುದಿಲ್ಲ. ಕಾಟಮುತ್ತಾಲ್ಲಿ, ತಲೆಮಾರಿನಿಂದ ಬಂದ ಮುತ್ತಾಗಲೀ ಹುಡುಗಿ ಗಂಡಿನೊಂದಿಗೆ ಮದುವೆಯಾದ ನಂತರವೇ ಕಟ್ಟಿಸಿಕೊಳ್ಳಬೇಕು. ಲಗ್ನದ ಪೂರ್ವದಲ್ಲಿ ಕಟ್ಟಿಸಿಕೊಂಡರೆ ಅವಳು ಜೋಗತಿಯಾಗುತ್ತಾಳೆ. ಜೋಗತಿಯರಿಗೆ ಕಟ್ಟುವ ಮುತ್ತನ್ನೇ ಅವರಿಗೂ ಕಟ್ಟುತ್ತಾರೆ. ಗಂಡನಿದ್ದವರು ಕಟ್ಟಿಕೊಂಡರೆ ಗರತಿಮುತ್ತಾಗುತ್ತದೆ. ಗಂಡನಿಲ್ಲದವರು ಕಟ್ಟಿಕೊಂಡರೆ ಸೂಳೆಮುತ್ತಾಗುತ್ತದೆ. ಕೆಂಪು-ಬಿಳಿ ಮುತ್ತುಗಳನ್ನು ಮಾತ್ರ ದಾರದಲ್ಲಿ ಪೋಣಿಸಿಕಟ್ಟಿಕೊಂಡರೆ ಸೂಳೆ ಮುತ್ತು. ಕೆಂಪು ಬಿಳಿ ಮುತ್ತುಗಳನ್ನು ಮಧ್ಯಮಧ್ಯದಲ್ಲಿ ಬೆಳ್ಳಿ ಇಲ್ಲವೇ ಬಂಗಾರದ ದೇವಿ ಪಾದ, ಮುಖ, ನಾಲಿಗಿ, ಮುಳ್ಳು ಮುಂತಾದವು ಗರತಿ ಮುತ್ತಿನಲ್ಲಿರುತ್ತವೆ. ಸೂಳೆ ಮುತ್ತು ಕಟ್ಟಿಸಿಕೊಂಡವರು ಈಗ ಮುತ್ತುಗಳ ಮಧ್ಯದಲ್ಲಿ ಇಂತಹವುಗಳನ್ನು ಹಾಕಿಕೊಳ್ಳುವುದು ಫ್ಯಾಶನ್ ಆಗಿಬಿಟ್ಟಿದೆ. ಇವರು ಕಟ್ಟಿಕೊಳ್ಳುವ ಮುತ್ತಿನಲ್ಲಿ ಎಂಜಲು ಮುತ್ತು. ಮೀಸಲು ಮುತ್ತು ಎಂದು ಎರಡು ಬಗೆಯಲ್ಲಿ ಇರುತ್ತವೆ. ಹೆಚ್ಚಿನವರು ಎಂಜಲು ಮುತ್ತನ್ನು ಕಟ್ಟಿಸಿಕೊಳ್ಳುತ್ತಾರೆ. ಇಂತಹವರು ಮಕ್ಕಳ ಅಥವಾ ಕುಟುಂಬದ ಇನ್ನಿತರ ಸದಸ್ಯರು ಬಿಟ್ಟ ಎಂಜಲನ್ನು ತಿನ್ನಬಹುದು. ಮಡಿವಂತಿಕೆಯನ್ನು ಕಟ್ಟುನಿಟ್ಟಾಗಿ ಅನುಸರಿಸುವಂತಿಲ್ಲ. ಮೀಸಲು ಮುತ್ತು ಕಟ್ಟಿಸಿಕೊಂಡವರು ಕಟ್ಟುನಿಟ್ಟಿನಿಂದ ಇರಬೇಕಾಗುತ್ತದೆ. ಮೊದಲಲ್ಲಿ ಜೋಗತಿಯರು ಮೀಸಲು ಮುತ್ತನ್ನು ಕಟ್ಟಿಸಿಕೊಂಡರೆ, ಗಂಡುಳ್ಳವರು ಎಂಜಲು ಮುತ್ತನ್ನು ಕಟ್ಟಿಸಿಕೊಳ್ಳುತ್ತಿದ್ದರು. ಜೋಗತಿಯರ ಅಲೌಕಿಕ ಬದುಕು ತೀರ ಲೌಕಿಕಕ್ಕಿಳಿದಾಗ ಅವರು ಕೂಡ ಎಂಜಲು ಮುತ್ತನ್ನು ಕಟ್ಟಿಕೊಳ್ಳಲು ಆರಂಭಿಸಿದರು. ಸೂಳೆ ಮುತ್ತು ಕಟ್ಟಿಸಿಕೊಂಡವರು ತಾವು ಮುಖ್ಯ ಜೋಗ ಪಂಥಕ್ಕೆ ಸೇರಿದವರೆಂದು ಹೇಳಿಕೊಳ್ಳುತ್ತಾರೆ.

*(ಮುಂದಿನ ಸಂಚಿಕೆಯಲ್ಲಿ ಮುಂದುವರೆಯುತ್ತದೆ)*

# ಪರಿಸರ ಪ್ರೇಮಿ - ಜೇನ್ ಗುಡಾಲ್

- ನೇಮಿಚಂದ್ರ



ಜೇನ್ ಗುಡಾಲ್ ಇಂದು ವಿಶ್ವವಿಖ್ಯಾತ ವಿಜ್ಞಾನಿ. 'ಇಕಾಲಜಿ' ವಿಭಾಗಕ್ಕೆ ವಿಶೇಷ ಕೊಡುಗೆ ನೀಡಿರುವ ಈ ವಿಜ್ಞಾನಿ ಆಫ್ರಿಕದ ಕಾಡುಗಳಲ್ಲಿ ಚಿಂಪಾಂಜಿಗಳನ್ನು ಅವುಗಳ ಸಹಜ ವಾಸಸ್ಥಾನದಲ್ಲಿ ನಾಲ್ಕು ದಶಕಗಳ ಕಾಲ ಅಧ್ಯಯನ ಮಾಡಿದವರು. ಈಕೆಯ 'ಫೀಲ್ಡ್‌ವರ್ಕ್' ಚಿಂಪಾಂಜಿಗಳ ಮೂರು ಪೀಳಿಗೆಗಳ ವಿಸ್ತರಿಸಿ ಸಸ್ತನಿಗಳನ್ನು ಕುರಿತ ಜಗತ್ತಿನ ಅತಿ ದೀರ್ಘ ಅಧ್ಯಯನವಾಗಿ ದಾಖಲೆ ಸ್ಥಾಪಿಸಿದೆ. ಈಕೆಯ ಅಧ್ಯಯನ ಚಿಂಪಾಂಜಿಗಳನ್ನು ಕುರಿತಂತೆ ಅನೇಕ ದಿಗ್ಭ್ರಮೆಯ ಸತ್ಯಗಳನ್ನು ಹೊರಹಾಕಿತು. ಮಾನವ ವಿಕಾಸದ ಹಾದಿಯತ್ತ ಬೆಳಕು ಚೆಲ್ಲಿತು.

ಇಂದು ಜೇನ್ ಗುಡಾಲ್ ಪ್ರಾಣಿಗಳ ಸಂರಕ್ಷಣೆಗೆ, ಜನರಲ್ಲಿ ಪರಿಸರ ಪ್ರಜ್ಞೆಯನ್ನು ಮೂಡಿಸಲು ಸತತವಾಗಿ ದುಡಿಯುತ್ತಿದ್ದಾರೆ. ಜೇನ್ ಗುಡಾಲ್ ವರ್ಷದಲ್ಲಿ ಮುನ್ನೂರು ದಿನ ಪರ್ಯಟಣೆಯಲ್ಲಿದ್ದು , ಒಂದಲ್ಲ ಒಂದು ದೇಶಕ್ಕೆ ಭೇಟಿಕೊಡುತ್ತಾ ಜನಗಲ್ಲಿ, ಬಹುಮುಖ್ಯವಾಗಿ ಎಳೆಯರಲ್ಲಿ ಪ್ರಾಣಿ ಮತ್ತು ಪರಿಸರದ ಸಂರಕ್ಷಣೆಯ ಬಗ್ಗೆ, ಶಾಂತಿಯ ಬಗ್ಗೆ ಜಾಗೃತಿ ಮೂಡಿಸುತ್ತಾರೆ. ಇಂತಹ ವಿಜ್ಞಾನಿ ಬೆಂಗಳೂರಿಗೆ ಬಂದಿದ್ದಾರೆ ಎಂದು ತಿಳಿದು ಅತ್ಯಂತ ಖುಷಿಯಾಯಿತು. ಅವರನ್ನು ಭೇಟಿಯಾಗುವ ಸಂದರ್ಶಿಸುವ ಕಾತುರದಲ್ಲಿ ಅವರಿದ್ದ ಹೋಟಲಿಗೆ ಫೋನ್ ಮಾಡಿದೆ. 'ಜೇನ್ ಗುಡಾಲ್ ಸಂಸ್ಥೆ'ಯ ಉಪಾಧ್ಯಕ್ಷರಾದ ಮೇರಿ ಲೆವಿಸ್ ಫೋನ್ ಎತ್ತಿಕೊಂಡರು. ಮಧ್ಯಾಹ್ನ ಮೂರುವರೆ ಗಂಟೆಗೆ ಗುಡಾಲ್ 'ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್ಡ್ ಸ್ಟಡೀಸ್'ಗೆ ಬರಲಿದ್ದರು. ಅಲ್ಲಿ 'ವಿಜ್ಞಾನ ಮತ್ತು ಆಧ್ಯಾತ್ಮ' ವಿಚಾರ ಸಂಕಿರಣದಲ್ಲಿ ಮಾತನಾಡಲಿದ್ದರು. ಆ ಕಾರ್ಯಕ್ರಮದ ನಂತರ ಸಂದರ್ಶನ ಮಾಡಿಕೊಳ್ಳುವಂತೆ ಹೇಳಿದರು.

ಅವರ ಭಾಷಣ ಮುಗಿದಿತ್ತು. ಅವರಿಗೆ ಮುಗಿಬಿದ್ದ ವಿದ್ಯಾರ್ಥಿಗಳು, ವಿಜ್ಞಾನಿಗಳು. ಸಿಕ್ಕಿದ ಹಾಳೆ ತೆಗೆದುಕೊಂಡು ಅವರ ಆಟೋಗ್ರಾಫ್ ಬೇಡುತ್ತಿದ್ದರು. ಅವರೊಡನೆ ಫೋಟೋ ಹೊಡೆಸಿಕೊಳ್ಳಲು ಕೇಳುತ್ತಿದ್ದರು. ಯಾರನ್ನೂ ಜೇನ್ ನಿರಾಕರಿಸಲಿಲ್ಲ. ಕೈನೋಯುತ್ತಿದ್ದರೂ ಸಹಿ ಹಾಕುತ್ತಲೇ ಹೋದರು. ಈ ಜನಜಂಗುಳಿಯಲ್ಲಿ ಸಂದರ್ಶನ ಮಾಡುವುದ್ಹೇಗೆ? ಮಾಡುವುದಾದರೂ ಎಲ್ಲಿ? ಮೇರಿ ನನ್ನನ್ನು ನೋಡಿ, 'ಈಗಲೇ ಸಂದರ್ಶನ ಮಾಡಿಕೊಂಡು ಬಿಡಿ, ಆಮೇಲೆ ಸ್ಟೇಡಿಯಂಗೆ ಹೋಗಬೇಕು, ರಾತ್ರಿ ತಡವಾಗುತ್ತೆ ಡಿನ್ನರ್ ಇದೆ. ಮತ್ತೆ ನಾಳೆ ಮುಂಜಾನೆಯೇ ಬೆಂಗಳೂರು ಬಿಡುತ್ತೇವೆ' ಎಂದರು. ಆಕೆಯೇನೋ ಹೇಳಿದರು, ನಾನು ಗುಡಾಲ್ ಎದುರು, ಮುಗಿ ಬಿದ್ದ ಜನರ ಹಿಂಭಾಗದಲ್ಲಿ ನಿಂತು ಅವರನ್ನು ತಲುಪುವುದ್ಹೇಗೆ ಎಂದು ನೋಡುತ್ತಾ ಚಡಪಡಿಸಿದೆ. ನನ್ನ ಅಸಹಾಯಕತೆಯನ್ನು ಗಮನಿಸಿದ ಗುಡಾಲ್ 'ಸಂದರ್ಶನ ಬೇಕಲ್ಲ, ಬನ್ನಿ ಇಲ್ಲೇ ಎಲ್ಲಾದರೂ ಆರಾಮಾಗಿ ಕುಳಿತುಕೊಳ್ಳೋಣ' ಎಂದವರೆ, ಸಣ್ಣ ಗಿಡದ ಹಿಂಭಾಗದಲ್ಲಿದ್ದ ಮೆಟ್ಟಿಲ ಮೇಲೆ ಆರಾಮವಾಗಿ ಕುಳಿತುಬಿಟ್ಟರು. ಅವರ ಬಗಲಲ್ಲಿ ಅಷ್ಟು ಹತ್ತಿರದಲ್ಲಿ ಕುಳಿತ ನನ್ನನ್ನು ಅವರ ಕಣ್ಣುಗಳಲ್ಲಿದ್ದ ಅಪಾರ ಕರುಣೆ ಮತ್ತು ಶಾಂತಿಯನ್ನು ಮಂತ್ರಮುಗ್ಧಳಾಗಿಸಿತು. ವಿಜ್ಞಾನ ಮತ್ತು ಮಾನವೀಯತೆ ಮೇಳೈಸಿದ ಮೇರಿ ಕ್ಯೂರಿಯಂತಹ ವಿಜ್ಞಾನಿಗಳು ಸದಾ ನನ್ನನ್ನು ಆಕರ್ಷಿಸಿದ್ದರು. ಗುಡಾಲ್ ಅಂತಹ ಅಗಾಧ ಮಾನವೀಯತೆಯ ವಿಜ್ಞಾನಿ. ನಾನು ಕಂಡದ್ದು ಅತ್ಯಂತ ಮಾನವೀಯ ವಿಜ್ಞಾನಿಯನ್ನು, ತಮ್ಮ ಜ್ಞಾನದ ಬೆಳಕನ್ನು, ಶಾಂತಿ ಸಂದೇಶವನ್ನು ವಿಶ್ವಕ್ಕೆ ಸಾರಲು ಹೊರಟ ಶಾಂತಿದೂತಳನ್ನು. ಈ ವರ್ಷದ ಏಪ್ರಿಲ್ ತಿಂಗಳಲ್ಲಿ ಎಪ್ಪತ್ತನೇ ವರ್ಷಕ್ಕೆ ಕಾಲಿಡುವ ಈ ವಿಜ್ಞಾನಿ ಪುಟಿವ ಉತ್ಸಾಹದಲ್ಲಿ ಬಿಡುವಿಲ್ಲದೆ ದುಡಿಯುತ್ತಿದ್ದಾರೆ.

ನೇಮಿ : ಎಲ್ಲರೂ ಅಮೆರಿಕೆಗೆ ಹೋಗಲು ಬಯಸಿದರೆ ನೀವು ಆಫ್ರಿಕಾಗೆ ಹೋಗಲು ಕಾತರಿಸಿದಿರಿ. ನೀವು ಪ್ರಾಣಿಶಾಸ್ತ್ರವನ್ನು ಕಾಲೇಜು, ವಿಶ್ವವಿದ್ಯಾಲಯಗಳಲ್ಲಿ ಓದಿದವರೂ ಅಲ್ಲ. ನಿಮ್ಮನ್ನು ಆಫ್ರಿಕಾ ಆಕರ್ಷಿಸಿದ್ದು ಹೇಗೆ?

ಗುಡಾಲ್ : ಪುಟ್ಟವಳಾಗಿದ್ದಾಗ ನಾನು ಟಾರ್ಝಾನ್ ಓದುತ್ತಿದ್ದೆ.

ನೇಮಿ : ಅದೇ ಟಾರ್ಝಾನ್ ಕಾಮಿಕ್ ಸ್ಟ್ರಿಪ್ಸ್?

ಗುಡಾಲ್ : ಉಹುಂ, ಈಗಿನ ಕಾಮಿಕ್ ಸ್ಟ್ರಿಪ್ ಅಲ್ಲ, ಚಲನಚಿತ್ರವೂ ಅಲ್ಲ. ಟಾರ್ಝಾನ್ ಸಾಹಸಗಳ ಪುಸ್ತಕಗಳು ಅವು. ಅದರಲ್ಲಿ ಒಂದೂ ಚಿತ್ರವಿರುತ್ತಿರಲಿಲ್ಲ. ನನ್ನ ಕಲ್ಪನೆ ಗರಿಗೆದರಿತು. ಆಫ್ರಿಕಾದಲ್ಲಿ ಪ್ರಾಣಿಗಳೊಡನೆ ವಾಸಿಸುವ ಕನಸು ಕಂಡೆ. ಕನಸು ದಿಟವಾಯಿತು. (ಮುಗುಳ್ನಕ್ಕು) ಇಂದು ಪ್ರತಿ ದಿನ ಮುಂಜಾನೆ ಎದ್ದಾಗ, ನಾನು ನನ್ನ ಕನಸಿನೊಡನಿರುತ್ತೇನೆ.

ನೇಮಿ : ಮೇಡಂ ನಿಮ್ಮಂತಹ ಜೀವಂತ ಉದಾಹರಣೆಗಳು ಇಂದು ಎದುರಿಗಿದ್ದರೂ, ವಿಜ್ಞಾನ ರಂಗದಲ್ಲಿ ಮಹಿಳೆಯರ ಸಂಖ್ಯೆ ಗಮನಾರ್ಹವಾಗಿ ಕಡಿಮೆ ಇದೆ, ಹೆಣ್ಣು ಮಕ್ಕಳನ್ನು ವಿಜ್ಞಾನ ರಂಗದತ್ತ ಆಕರ್ಷಿಸಲು ಏನು ಮಾಡಬೇಕು?

ಗುಡಾಲ್ : ಅವರನ್ನು ತಲುಪಬೇಕು. ಇಂದು ಮುಂದುವರೆದ ದೇಶಗಳಲ್ಲಿ ಹೆಣ್ಣು ಮಕ್ಕಗಳನ್ನು ವಿಜ್ಞಾನ ತಂತ್ರಜ್ಞಾನ ರಂಗಗಳತ್ತ ಸೆಳೆಯಲು ವಿಶೇಷ ಸಂಘ ಸಂಸ್ಥೆಗಳು ರೂಪುಗೊಂಡಿವೆ. ಈ ರಂಗದಲ್ಲಿ ಮುನ್ನಡೆದ ಸಾಮರ್ಥ್ಯ ಆತ್ಮವಿಶ್ವಾಸ ಅವರಲ್ಲಿ ತುಂಬುವ ಪ್ರಯತ್ನಗಳಿವೆ.

ನೇಮಿ : ನಮ್ಮ ಮಾಧ್ಯಮಗಳು ಈ ರಂಗಗಳಲ್ಲಿಯ ಮಹಿಳೆಯರ ಸಾಧನೆಯತ್ತ ಕೇಂದ್ರೀಕರಿಸುತ್ತಿಲ್ಲ ಎನಿಸುವುದಿಲ್ಲವೆ ಮೇಡಂ. ಇಂದು ನಿಮ್ಮನ್ನು ಪ್ರತಿಯೊಂದು ಪತ್ರಿಕೆಯ ಮುಖ ಪುಟದಲ್ಲಿ ಕಾಣಲು ನಾನು ಇಚ್ಛಿಸಿದ್ದೆ. ನಿಮ್ಮ ಸಾಧನೆ ಅಷ್ಟು ಅಗಾಧವಾಗಿದೆ. ಆದರೆ ನಮ್ಮ ಪತ್ರಿಕೆಗಳಲ್ಲಾಗಲಿ, ಅಮೆರಿಕೆಯ ಪತ್ರಿಕೆಗಳಲ್ಲಾಗಲಿ ಮುಖಪುಟದಲ್ಲಿ ರಾರಾಜಿಸುವುದು ಸೌಂದರ್ಯ ರಾಣಿಯರು, ರೂಪದರ್ಶಿಯರು, ಸಿನಿಮಾ ತಾರೆಯರು. ವಿಜ್ಞಾನಿಗಳಾಗಲಿ, ವೈಮಾನಿಕರಾಗಲಿ, ಸಮಾಜ ಸೇವಕರಾಗಲಿ ಮುಖಪುಟಗಳ ವಸ್ತುವಾಗುವುದಿಲ್ಲ. ಹೆಣ್ಣು ಮಕ್ಕಳ ಮುಂದೆ ಪರ್ಯಾಯ ಮಾದರಿಗಳನ್ನು ಇಡುವ ಮಹತ್ತರ ಕೆಲಸ ಆಗಬೇಕಿದೆ ಅನಿಸುವುದಿಲ್ಲವೆ?

ಗುಡಾಲ್ : ಆಗುತ್ತಿದೆ. ಡಿಸ್ಕವರಿ, ನ್ಯಾಷನಲ್ ಜಿಯಾಗ್ರಫಿಕ್ ಅಂತಹ ಚಾನೆಲ್‌ಗಳು ಜ್ಞಾನ, ವಿಜ್ಞಾನದತ್ತ ವಿಶೇಷ ಗಮನ ಸೆಳೆಯುತ್ತಿವೆ. ಬದಲಾವಣೆ ಖಂಡಿತಾ ಆಗುತ್ತದೆ, ನಾವು ಬಯಸಿದರೆ.

ನೇಮಿ : ಮೇಡಂ, ಆಗಾಗ್ಗೆ ಹೆಣ್ಣು ಮಕ್ಕಳ ಶಾಲೆ ಕಾಲೇಜುಗಳಲ್ಲಿ ನಾನು ಮಹಿಳಾ ವಿಜ್ಞಾನಿಗಳ ಬಗ್ಗೆ ಮಾತನಾಡುವುದುಂಟು. ಮೇರಿ ಕ್ಯೂರಿಯಿಂದ ಆರಂಭಿಸಿ, ನಿಮ್ಮ ಸಾಧನೆಯನ್ನು ಪರಿಚಯಿಸುತ್ತೇನೆ. ಕನಸುಗಳ ಬೆನ್ನತ್ತಿ ಹೋಗುವುದನ್ನು ಈ ಮಕ್ಕಳಿಗೆ ಹೇಳುತ್ತೇನೆ. ಮೇರಿ ಕ್ಯೂರಿಯ ಬಗ್ಗೆ ಒಂದು ಮಾತು ಹೇಳಿದ್ದರು "uncorrupted by fame" ಎಂದು, ಆ ಮಾತು ನಿಮಗೂ ಅಷ್ಟೇ ಅನ್ವಯವಾಗುತ್ತದೆ.

ಗುಡಾಲ್ : (ಸುಮ್ಮನೆ ಮುಗುಳ್ನಕ್ಕರು)

ನೇಮಿ : ಯಾವ ಪ್ರಾಣಿಯೂ ಬೋನಿನಲ್ಲಿ ಇರಬಾರದೆಂದು ಬಯಸುತ್ತೀರ. ವೈಜ್ಞಾನಿಕ, ವೈದ್ಯಕೀಯ ಸಂಶೋಧನೆಗಳಿಗೆ ಅವು ತೀರಾ ಅಗತ್ಯ ಎನಿಸಿದಾಗ ಪ್ರಯೋಗಶಾಲೆಯಲ್ಲಿ ಅವುಗಳನ್ನು ಎಷ್ಟು ಸಾಧ್ಯವೋ ಅಷ್ಟು ಮಾನವೀಯವಾಗಿ ನೋಡಿಕೊಳ್ಳಬೇಕೆಂದು ನಿಮ್ಮ ಆಗ್ರಹ. ಆದರೆ ಇಂದು ಮುಂದುವರೆದ ದೇಶಗಳಿಂದ ನಾಲಿಗೆಯ ತೀಟೆಗೆ 'ಬುಷ್ ಮೀಟ್' ಬಗ್ಗೆ ರುಚಿ ಬೆಳೆಸಿಕೊಂಡು, ಬೇಡಿಕೆ ಹೆಚ್ಚಿ, ಆಫ್ರಿಕಾ, ದಕ್ಷಿಣ ಅಮೆರಿಕದ ಕಾಡುಗಳಿಂದ ಕೋತಿಗಳು, ಸ್ತಾತಗಳಂತಹ ವಿಶೇಷ ಪ್ರಾಣಿಗಳೂ ಬಲಿಯಾಗುತ್ತಿವೆ, ಇದನ್ನು ನಿಯಂತ್ರಿಸುವ ಬಗೆ?

ಗುಡಾಲ್ : ಬರೀ ಆಫ್ರಿಕಾ, ದಕ್ಷಿಣ ಅಮೆರಿಕ ಅಲ್ಲ ನಿಮ್ಮ ಭಾರತದಿಂದಲೂ ಇಂತಹ ಮಾಂಸಕ್ಕೆ ಪ್ರಾಣಿಗಳು ಬಲಿಯಾಗುತ್ತಿವೆ. ಇದು ನಿಲ್ಲಬೇಕಾದರೆ ಜನರಲ್ಲಿ ಪರಿಸರ ಪ್ರಜ್ಞೆಯನ್ನು ಮೂಡಿಬೇಕು. ಪಶು, ಪಕ್ಷಿ , ಗಿಡ, ಮರಗಳಂತೆಯೇ ನಾವೂ ಈ ಪ್ರಕೃತಿಯ ಒಂದು ಭಾಗವೆಂದು ನೆನಪಿಸಬೇಕು. ಮನುಷ್ಯನಿಗೆ ಮಾತ್ರ ಬದುಕುವ ಹಕ್ಕಿದೆ, ಪ್ರಕೃತಿಯ ಪ್ರತಿಯೊಂದು ಮನುಷ್ಯನ ಲಾಭಕ್ಕೆ ಎಂಬ ಅಹಂಕಾರವನ್ನು ತೊರೆಯಬೇಕು.

ನೇಮಿ : ಮಕ್ಕಳಿಗಾಗಿ ನೀವು 'ರೂಟ್ಸ್ ಅಂಡ್ ಶೂಟ್ಸ್' ಕಾರ್ಯಕ್ರಮ ಆರಂಭಿಸಿದ್ದೀರಿ. ಮಕ್ಕಳಿಗೆ ಎಳೆಯ ವಯಸ್ಸಿನಲ್ಲಿಯೇ ನಮ್ಮ ಭೂಮಿಯನ್ನು ರಕ್ಷಿಸುವ ಬಗ್ಗೆ, ಕಾಪಾಡುವ ಬಗ್ಗೆ ತಿಳಿಸಿ ಹೇಳುವುದರಲ್ಲಿ ನಮ್ಮ ಭವಿಷ್ಯದ ಭರವಸೆ ಇದೆ ಎಂದಿದ್ದೀರಿ. ಈ 'ರೂಟ್ಸ್ ಅಂಡ್ ಶೂಟ್ಸ್' ಶಾಖೆಗಳು ಭಾರತದಲ್ಲಿಯೂ ಇವೆಯೆ?

ಗುಡಾಲ್ : ಹೌದು, ಭಾರತದಲ್ಲೂ ಇದೆ, ಮೇರಿಯನ್ನು ಕೇಳಿ ಎಲ್ಲೆಲ್ಲಿ ಇವೆ ಎಂದು ತಿಳಿಸುತ್ತಾರೆ.

ನೇಮಿ : ಮೇಡಂ, ನೀವು ಬರೆದ ಪುಸ್ತಕಗಳ ಪಟ್ಟಿ ನನ್ನಲ್ಲಿದೆ. ಇವಲ್ಲದೆ ನೀವು ಇತ್ತೀಚೆಗೆ ಬರೆದ ಪುಸ್ತಕಗಳಾವುದಾದರೂ ಇದೆಯೆ?

ಗುಡಾಲ್ : (ನನ್ನ ಪಟ್ಟಿ ನೋಡುತ್ತಾ, ಅದರಲ್ಲೇ ಬರೆದರು) ಇದೆ, 'ರೀಸನ್ ಫಾರ್ ಹೋಪ್',

ನೇಮಿ : ಈಗ ತಾನೆ ನಿಮ್ಮ ಭಾಷಣದಲ್ಲಿ ಹೇಳಿದಿರಿ, 1960ರಲ್ಲಿ ನೀವು ಟಾನ್ಸಾನಿಯಾಗೆ ಹೋದಾಗ ಅಲ್ಲಿದ್ದ ದಟ್ಟ ಕಾಡುಗಳು ಮಾಯವಾಗಿವೆ, ಮರಳುಗಾಡುಗಳು ಹಿಗ್ಗಿವೆ. ಆದರೂ ನಿಮಗೆ 'ರೀಸನ್ ಫಾರ್ ಹೋಪ್' ಕಾಣುತ್ತಿದೆಯೇ?

ಗುಡಾಲ್ : ಹೌದು ನನಗೆ ಭರವಸೆ ಇದೆ. ದಕ್ಷಿಣ ಆಫ್ರಿಕಾದಲ್ಲಿ ನೆಲ್ಸನ್ ಮಂಡೇಲಾ ದಶಕ ದಶಕಗಳನ್ನು ಕಳೆದ ಆ ಜೈಲಿಗೆ ನಾನು ಭೇಟಿಕೊಟ್ಟಿದ್ದೆ. ಒಂದಿಷ್ಟೂ ಕಹಿ ಇಲ್ಲದೆ ಹೊರಬಂದ ಮಂಡೇಲಾ, ತಮ್ಮ ದೇಶವನ್ನು ರಕ್ತಪಾತವಿಲ್ಲದೆ ಮುನ್ನಡೆಸಿದರು. ನಮ್ಮೆದುರು ನೂರಾರು ಇಂತಹ ಉದಾಹರಣೆಗಳಿವೆ. ಭರವಸೆಯ ಉದಾಹರಣೆಗಳು. ನಮ್ಮ ನಾಳೆಗಳನ್ನು ನಾವು ಒಬ್ಬೊಬ್ಬರೂ ಬದಲಿಸಬಲ್ಲೆವು.

ನೇಮಿ : ಕೇವಲ ನಾಲ್ಕು ದಶಕದಲ್ಲಿ ಟಾನ್ಸಾನಿಯಾದ ಕಾಡುಗಳು, ಚಿಂಪಾಂಜಿಗಳು ಮಾಯವಾದದ್ದಾದರೂ ಹೇಗೆ?

ಗುಡಾಲ್ : ತಟ್ಟನೆ ಏರಿದ ಜನಸಂಖ್ಯೆಯಿಂದ. ಇದು ಸಹಜವಾಗಿ ಹೆಚ್ಚಿದ ಜನಸಂಖ್ಯೆಯಲ್ಲ. ಸುತ್ತ ಮುತ್ತಲ ದೇಶಗಳಲ್ಲಿ ಯುದ್ಧಗಳಾದಾಗ ಜನ ಇಲ್ಲಿಗೆ ಸಂತ್ರಸ್ತರಾಗಿ ಬಂದಿಳಿದರು. ಶಾಂತಿ ಇಲ್ಲದೆ, ಪರಿಸರ ಸಂರಕ್ಷಣೆ ಸಾಧ್ಯವಿಲ್ಲ.

ನೇಮಿ : ಮೇಡಂ, ನಾನು ಮೇರಿ ಕ್ಯೂರಿಯ ಪ್ರಯೋಗ ಶಾಲೆಯನ್ನು ಹುಡುಕಿ ಪ್ಯಾರೀಸಿಗೆ ಹೋಗಿದ್ದೆ, ಮರಿಯಾ ರೇಕಿಯನ್ನು ಹುಡುಕಿ ನಾಸಾಗೆ, ಎಷ್ಟು ನಿರಾಯಾಸವಾಗಿ ನಮ್ಮೂರಲ್ಲೆ ನಿಮ್ಮನ್ನು ಕಾಣುವ ಭಾಗ್ಯ ದೊರೆಯಿತು. ನನ್ನೆದುರಿಗೆ ಮಹಿಳಾ ಸಾಧನೆಯ ಮಾನವೀಯತೆಯ ಶ್ರೇಷ್ಠ ಉದಾಹರಣೆಯಾಗಿ ನೀವಿದ್ದೀರಿ. ನಿಮ್ಮೊಡನೆ ಇಷ್ಟು ಸಮಯ ಕಳೆಯಲು ಅವಕಾಶ ಮಾಡಿಕೊಟ್ಟದ್ದಕ್ಕೆ ವಂದನೆಗಳು.

ಗುಡಾಲ್ ಮುಗುಳ್ನಕ್ಕರು. ಇಡೀ ಜಗತ್ತಿಗೇ ಭರವಸೆಯ ಬೆಳಕ ಚೆಲ್ಲುವಂತಹ ಮುಗುಳ್ನಗೆ ಅದಾಗಿತ್ತು.

▼

RNI No. 45577/88

"Achala" 108, Skyline Surabhi,
14 - P , Vidyapeeta Road,
BSK III Stage,
Bangalore - 560 085

To :

Smt/Sri

CPMG/KA/BG-8/2003-05
Book-Post/News Letter